ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯ ತತ್ವಾದರ್ಶಗಳನ್ನು ಸಾರುವ

# ಪವಿತ್ರ ಸಂದೇಶ

ಕನ್ನಡ ಪಾಕ್ಷಿಕ

ಚಂದಾದರ ವಿವರ

| | | |
|---|---|---|
| ದೇಶ | | |
| ವಾರ್ಷಿಕ | ₹ | 200–00 |
| ಅರ್ಧ ವಾರ್ಷಿಕ | ₹ | 100–00 |
| ಬಿಡಿ ಪ್ರತಿ | ₹ | 10–00 |
| ಗಲ್ಫ್ ರಾಷ್ಟ್ರಗಳಿಗೆ | | |
| ವಾರ್ಷಿಕ | ₹ | 1,500–00 |
| ಅರ್ಧ ವಾರ್ಷಿಕ | ₹ | 750–00 |

❖ ಸಂಪುಟ: 18 ❖ ಸಂಚಿಕೆ: 11 ❖ ಪುಟ: 12 ❖ ಜೂನ್ 1-15, 2014 ❖ ಬೆಲೆ: ₹ 10/- http://www.salafimangalore.org

# ಪಕ್ಷಿ ಪ್ರಪಂಚದ ವಿಸ್ಮಯ ಕುರ್‌ಆನಿನಲ್ಲಿ!



**ಅಲ್ಲಾಹು ಹೇಳುತ್ತಾನೆ: "ಅಂತರಿಕ್ಷದಲ್ಲಿ ನಿಯಂತ್ರಿಸಲ್ಪಟ್ಟು (ಹಾರಾಡುವ) ಪಕ್ಷಿಗಳ ಕಡೆಗೆ ಅವರು ನೋಡುವುದಿಲ್ಲವೇ? ಅವುಗಳನ್ನು ಅಲ್ಲಾಹನ ಹೊರತು (ಯಾರೂ) ಹಿಡಿದು ನಿಲ್ಲಿಸುವುದಿಲ್ಲ. ನಿಜವಾಗಿಯೂ ವಿಶ್ವಾಸವಿಡುವ ಜನರಿಗೆ ಅದರಲ್ಲಿ ಅನೇಕ ಸಂದೇಶಗಳಿವೆ." (26:79). ರೆಕ್ಕೆಗಳಿರುವ ಗೆಳೆಯರ ಲೋಕಕ್ಕೆ ಹೊರಡಲಿಕ್ಕಿರುವ ಪಕ್ಷಿ ಶಾಸ್ತ್ರ (ORNITHOLOGY)ವನ್ನು ಕಲಿಯಲು ಈ ಮೇಲಿನ ಕುರ್‌ಆನ್ ಸೂಕ್ತದ ಮೂಲಕ ಅಲ್ಲಾಹು ಸೂಚಿಸುತ್ತಾನೆ. ಪಕ್ಷಿಗಳನ್ನು ವರ್ಗೀಕರಿಸಲು ಪ್ರಾರಂಭಿಸಿದ್ದು ಸ್ವೀಡನಿನ ಜೀವಶಾಸ್ತ್ರಜ್ಞನಾದ ಕಾಳ್‌ಲಿನೋಯ್ಡ್ ಎಂಬಾತನಾಗಿದ್ದಾನೆ. ಅದಕ್ಕಿಂತ ಶತಮಾನಗಳ ಹಿಂದೆ ಕುರ್‌ಆನ್ ಹೇಳುತ್ತದೆ: "(ರೆಕ್ಕೆಗಳನ್ನು ಹರಡಿ) ಸಾಲುಗಟ್ಟುತ್ತಲೂ (ರೆಕ್ಕೆಗಳನ್ನು) ಒಟ್ಟು ಸೇರಿಸುತ್ತಲೂ ಅವರ ಮೇಲಿಂದ (ಹಾರಾಡುತ್ತಿರುವ) ಪಕ್ಷಿಗಳನ್ನು ಅವರು ನೋಡುವುದಿಲ್ಲವೇ? ಪರಮ ದಯಾಮಯನ ಹೊರತು(ಬೇರಾರೂ) ಅವುಗಳನ್ನು ಹಿಡಿದು ನಿಲ್ಲಿಸುವುದಿಲ್ಲ. ನಿಶ್ಚಯವಾಗಿಯೂ ಅವನು ಎಲ್ಲಾ ವಸ್ತುಗಳ ಕುರಿತು ವೀಕ್ಷಿಸುವವನಾಗಿದ್ದಾನೆ" (ಕುರ್‌ಆನ್ 67:19)**

ಅಲ್ಲಾಹನ ಭೂಮಿಯಲ್ಲಿ ಸಂಚರಿಸಿ ಸೃಷ್ಟಿಕರ್ತನ ಸೃಷ್ಟಿ ವೈವಿಧ್ಯಗಳ ಅಪಾರ ಸಾಮರ್ಥ್ಯವನ್ನು ಅರಿತುಕೊಳ್ಳಲು ವಿಶುದ್ಧ ಕುರ್‌ಆನ್ ಹಲವೆಡೆಗಳಲ್ಲಿ ಕರೆ ನೀಡುತ್ತಿದೆ. ಅಲ್ಲಾಹು ಸೃಷ್ಟಿಸಿದ ಯಾವುದೇ ವಸ್ತುವಿನ ಕಡೆಗೆ ಅವರು ನೋಡುವುದಿಲ್ಲವೇ? (16:48) ಎಂಬ ಸಾಮಾನ್ಯ ಪ್ರಶ್ನೆಯೊಂದು ಕುರಾನಿನಲ್ಲಿದೆ. ಎಲ್ಲಾ ಸೃಷ್ಟಿಗಳನ್ನು (29: 19, 20), ರಾತ್ರಿ ಹಾಗೂ ಹಗಲನ್ನು (27:86), ಆಕಾಶವನ್ನು (15:16, 50:6, 88:18), ಅಲ್ಲಿಂದ ವರ್ಷಿಸುವ ನೀರನ್ನು (32:27), ಅದರ ಮೂಲಕ ಮೊಳಕೆ ಯೊಡೆಯುವ ಸಸ್ಯಗಳನ್ನು (26:7, 56:33-64), ಅವುಗಳಿಂದ ಸಿಗುವ ಫಲಗಳನ್ನು (6:99), ಇತರ ಆಹಾರಗಳನ್ನು (80: 24-32), ಕುರಿತು ಚಿಂತಿಸಲು ಕುರ್‌ಆನ್‌ನ ಮೂಲಕ ಅಲ್ಲಾಹು ಆಹ್ವಾನಿಸುತ್ತಾನೆ. ಅದೇ ರೀತಿ ಮಾನವ ಸೃಷ್ಟಿ (86:5-7), ಜಾನುವಾರುಗಳು (36:71), ಅವುಗಳ ಪೈಕಿ ಒಂಟೆಯ ಕುರಿತು (88:17), ಆಕಾಶ-ಭೂಮಿಗಳ ಕುರಿತು (7:185, 10:101, 17:99, 34:9, 46:13, 56: 63-64) ಮತ್ತು ಅವುಗಳಲ್ಲಿರುವ ಪಕ್ಷಿಗಳ ಕುರಿತು ಚಿಂತಿಸಲು ಮತ್ತು ಸಂಶೋಧಿಸಲು ಕುರ್‌ಆನ್ ಕರೆ ನೀಡುತ್ತದೆ.

ಅಲ್ಲಾಹು ಹೇಳುತ್ತಾನೆ: "ಅಂತರಿಕ್ಷದಲ್ಲಿ ನಿಯಂತ್ರಿಸಲ್ಪಟ್ಟು (ಹಾರಾಡುವ) ಪಕ್ಷಿಗಳ ಕಡೆಗೆ ಅವರು ನೋಡುವುದಿಲ್ಲವೇ? ಅವುಗಳನ್ನು ಅಲ್ಲಾಹನ ಹೊರತು (ಯಾರೂ) ಹಿಡಿದು ನಿಲ್ಲಿಸುವುದಿಲ್ಲ. ನಿಜವಾಗಿಯೂ ವಿಶ್ವಾಸವಿಡುವ ಜನರಿಗೆ ಅದರಲ್ಲಿ ಅನೇಕ ಸಂದೇಶಗಳಿವೆ." (26:79). ರೆಕ್ಕೆಗಳಿರುವ ಗೆಳೆಯರ ಲೋಕಕ್ಕೆ ಹೊರಡಲಿಕ್ಕಿರುವ ಪಕ್ಷಿ ಶಾಸ್ತ್ರ (ORNITHOLOGY)ವನ್ನು ಕಲಿಯಲು ಈ ಮೇಲಿನ ಕುರ್‌ಆನ್ ಸೂಕ್ತದ ಮೂಲಕ ಅಲ್ಲಾಹು ಸೂಚಿಸುತ್ತಾನೆ. ಪಕ್ಷಿಗಳನ್ನು ವರ್ಗೀಕರಿಸಲು ಪ್ರಾರಂಭಿಸಿದ್ದು ಸ್ವೀಡನಿನ ಜೀವಶಾಸ್ತ್ರಜ್ಞನಾದ ಕಾಳ್‌ಲಿನೋಯ್ಡ್ ಎಂಬಾತನಾಗಿದ್ದಾನೆ. ಅದಕ್ಕಿಂತ ಶತಮಾನಗಳ ಹಿಂದೆ ಕುರ್‌ಆನ್ ಹೇಳುತ್ತದೆ: "(ರೆಕ್ಕೆಗಳನ್ನು ಹರಡಿ) ಸಾಲುಗಟ್ಟುತ್ತಲೂ (ರೆಕ್ಕೆಗಳನ್ನು) ಒಟ್ಟು ಸೇರಿಸುತ್ತಲೂ ಅವರ ಮೇಲಿಂದ (ಹಾರಾಡುತ್ತಿರುವ) ಪಕ್ಷಿಗಳನ್ನು ಅವರು ನೋಡುವುದಿಲ್ಲವೇ? ಪರಮ ದಯಾಮಯನ ಹೊರತು(ಬೇರಾರೂ) ಅವುಗಳನ್ನು ಹಿಡಿದು ನಿಲ್ಲಿಸುವುದಿಲ್ಲ. ನಿಶ್ಚಯವಾಗಿಯೂ ಅವನು ಎಲ್ಲಾ ವಸ್ತುಗಳ ಕುರಿತು ವೀಕ್ಷಿಸುವವನಾಗಿದ್ದಾನೆ" (ಕುರ್‌ಆನ್ 67:19)



ಪಕ್ಷಿಗಳ ಕುರಿತು ಕಲಿಯಬೇಕೆಂದೂ ಸಂಶೋಧನಾ ಭಾವದಿಂದ ನೋಡಬೇಕೆಂದೂ ಮೇಲಿನ ಕುರ್‌ಆನ್ ವಚನವು ನಮ್ಮನ್ನು ನೆನಪಿಸುತ್ತದೆ. ಪುನಃ ಅಲ್ಲಾಹು ಹೇಳುತ್ತಾನೆ: "ಭೂಮಿ-ಆಕಾಶಗಳಲ್ಲಿರುವವರು ಮತ್ತು (ಗಾಳಿಯಲ್ಲಿ ರೆಕ್ಕಗಳನ್ನು ಹರಡಿ) ಸಾಲುಗಟ್ಟಿರುವ ಪಕ್ಷಿಗಳು ಅಲ್ಲಾಹನ ಮಹತ್ವವನ್ನು ಕೊಂಡಾಡುತ್ತಿರುವುದನ್ನು ನೀವು ನೋಡುವುದಿಲ್ಲವೇ? ಪ್ರತಿಯೊಂದಕ್ಕೂ ತಂತಮ್ಮ ಪ್ರಾರ್ಥನೆ ಹಾಗೂ ಕೀರ್ತನೆ (ಹೇಗೆಂದು) ಗೊತ್ತಿದೆ ಮತ್ತು ಅವರು ಮಾಡುತ್ತಿರುವುದರ ಕುರಿತು ಅಲ್ಲಾಹು ಬಲ್ಲನು." (ಕುರ್‌ಆನ್ 24:41)

ಈ ಸೂಕ್ತದಲ್ಲಿ ಪಕ್ಷಿಗಳ ಕುರಿತಾಗಿ ಇನ್ನೂ ಅನೇಕ ವಿಷಯಗಳನ್ನು ಕಲಿಯಲಿಕ್ಕಿದೆಯೆಂಬುದರ ಸೂಚನೆಯಿದೆ. ಮನುಷ್ಯರನ್ನೂ ಪಕ್ಷಿಗಳನ್ನೂ ಒಟ್ಟು ಸೇರಿಸಿ ಎರಡು ಕಾಲುಗಳಲ್ಲಿ ನಡೆಯುವವರು ಎಂದು ಕುರ್‌ಆನ್ ಹೇಳಿದೆ. (ಕುರ್‌ಆನ್ 24:45). ಭೂಮಿಯಲ್ಲಿ (ಚಲಿಸುವ)ಯಾವುದೇ ಪ್ರಾಣಿಯಾಗಲಿ, ಎರಡು ರೆಕ್ಕೆಗಳಿಂದ ಹಾರುವ ಯಾವುದೇ ಪಕ್ಷಿಯಾಗಲಿ ನಿಮ್ಮಂತಿರುವ ಕೆಲವು ವರ್ಗಗಳೇ ವಿನಾ (ಇನ್ನೇನೂ) ಅಲ್ಲ" (ಕುರ್‌ಆನ್ 6:38) ಎಂದು ಅಲ್ಲಾಹು ಹೇಳುತ್ತಾನೆ. ಪ್ರತಿಯೊಂದು ಜೀವಿ ವರ್ಗಕ್ಕೂ ಅವುಗಳದ್ದೇ ಆದ ಕೆಲವು ವಿಶೇಷತೆಗಳೂ ವ್ಯತಿರಿಕ್ತತೆಗಳೂ ಇವೆ. ಮಾನವರು ಹಲವು ವಿಶೇಷತೆಗಳಿರುವ ಒಂದು ವ್ಯತಿರಿಕ್ತ ಸಮೂಹವಾಗಿದ್ದಾರೆ. ಪಕ್ಷಿಗಳ ಕುರಿತು ಸೂಕ್ಷ್ಮವಾಗಿ ಸಂಶೋಧನೆ ನಡೆಸಿದರೆ ಪ್ರತಿಯೊಂದು ಪಕ್ಷಿ ಕುಟುಂಬವನ್ನು ವಿಭಿನ್ನವಾಗಿ ಸೃಷ್ಟಿಸಲಾಗಿದೆಯೆಂಬುದನ್ನು ತಿಳಿಯಬಹುದಾಗಿದೆ.

ಆಕಾಶ-ಭೂಮಿಗಳಲ್ಲಿರುವ ಎಷ್ಟೆಷ್ಟೋ ದೃಷ್ಟಾಂತಗಳ ಬಳಿಯಿಂದ ತೀರಾ ನಿರ್ಲಕ್ಷ್ಯರಾಗಿ ಹಾದು ಹೋಗುವವರನ್ನು ಕುರ್‌ಆನ್ ಪರಿಚಯಿಸುತ್ತದೆ. (ಕುರ್‌ಆನ್ 12:105). ಅಲ್ಲಾಹನ ದೃಷ್ಟಾಂತವಾದ ಈ ಪಕ್ಷಿಗಳನ್ನು ಗಮನಿಸದೆ ನಿರ್ಲಕ್ಷ್ಯರಾಗಿ ಹಾದು ಹೋಗುವವರೂ ಈ ವಾಕ್ಯದಡಿ ಬರಲಾರರೇ? "ಭೂಮಿಯಲ್ಲಿರುವುದನ್ನೆಲ್ಲಾ ಸೃಷ್ಟಿಸಿದ್ದು ಮಾನವನಿಗಾಗಿ" (ಕುರ್‌ಆನ್ 2:29, 6:13), ಅಲ್ಲಾಹು ನಿಮಗೆ ಭೂಮಿಯಲ್ಲಿರುವುದನ್ನು ಅಧೀನಗೊಳಿಸಿ ಕೊಟ್ಟಿರುವನು." (ಕುರ್‌ಆನ್ 22:65)

ಅಲ್ಲಾಹು ನಿಮಗೆ ಆಕಾಶ-ಭೂಮಿಗಳಲ್ಲಿರುವುದನ್ನು ಅಧೀನಗೊಳಿಸಿಕೊಟ್ಟಿರುವುದನ್ನು ನೀವು ನೋಡುವುದಿಲ್ಲವೇ?" (ಕುರ್‌ಆನ್ 31:20) "ಅದರಲ್ಲಿ ಚಿಂತಿಸುವವರಿಗೆ ಅನೇಕ ನಿದರ್ಶನಗಳಿವೆ" (ಕುರ್‌ಆನ್ 45:13) ಎಂದು ಅಲ್ಲಾಹು ಹೇಳುತ್ತಾನೆ. ಭೂಮಿಯಲ್ಲಿರುವುದನ್ನೆಲ್ಲಾ ಸೃಷ್ಟಿಸಿದ್ದು ಮತ್ತು ಅಧೀನಗೊಳಿಸಿಕೊಟ್ಟದ್ದು ಮಾನವನಿಗಾಗಿ ಮತ್ತು ಅದರಲ್ಲಿರುವ ದೃಷ್ಟಾಂತಗಳನ್ನು ಮಾನವನು (2ನೇ ಪುಟಕ್ಕೆ)



ಸಂಪಾದಕೀಯ

بسم الله الرحمن الرحيم

الحمد لله رب العالمين والصلاة والسلام على نبينا محمد وآله وصحبه أجمعين أما بعد

# ಸಮುದಾಯವನ್ನು ಸಕಲ ದುರಂತಗಳಿಂದ ಕಾಪಾಡಲು ಮಕ್ಕಳಿಗೆ ಧಾರ್ಮಿಕ ಪ್ರಜ್ಞೆಯ ಶಿಕ್ಷಣ ಕೊಡಿ

ಮಾನವ ರಾಶಿಗೆ ಮಾದರಿಯಾದ ಉತ್ತಮ ಸಮುದಾಯವಾಗಬೇಕಾಗಿದ್ದ ಮುಸ್ಲಿಮರು ದೇಶದಲ್ಲಿ ಬಹಿಷ್ಕೃತ ಸಮುದಾಯವಾಗಿ ಮಾರ್ಪಡುತ್ತಿದ್ದಾರೆ. ಮುಸ್ಲಿಮರೆಂದರೆ ಇತರರು ಅಸಹ್ಯ ಪಡುವಂತಹ ದುಸ್ಥಿತಿಯಾಗಿದೆ. ಬಹುತೇಕ ರಾಜಕೀಯ ಪಕ್ಷಗಳು ತಮ್ಮ ಸ್ವಾರ್ಥಕ್ಕಾಗಿ ಮುಸ್ಲಿಮರನ್ನು ಬಲಿಗೊಡುತ್ತಿದ್ದಾರೆ. ಎಲ್ಲಾ ಅಪರಾಧಿ ಕೃತ್ಯಗಳಲ್ಲಿ ಮುಸ್ಲಿಮರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ. ದೇಶದಲ್ಲಿ ಆಗಾಗ ನಡೆಯುತ್ತಿರುವ ಕೋಮು ಗಲಭೆಗಳಲ್ಲಿ ಸಾವಿರಾರು ಮುಸ್ಲಿಮರು ಆಹುತಿಯಾಗುತ್ತಿದ್ದಾರೆ. ಮುಸ್ಲಿಮರ ಈ ಅಧೋಗತಿಗೆ ಕಾರಣ ಅಲ್ಲಾಹನ ಭಯ ಮತ್ತು ಧಾರ್ಮಿಕ ಬೋಧ ಇಲ್ಲದಿರುವುದಾಗಿದೆ.

ದೇಶದ ಬಹುತೇಕ ಮುಸ್ಲಿಮರಿಗೆ ಅಲ್ಲಾಹನ ಪರಿಚಯವಾಗಲಿ, ನೈಜ ಇಸ್ಲಾಮಿನ ಜ್ಞಾನವಾಗಲಿ ಇಲ್ಲದಿರುವುದು ಶೋಚನೀಯ. ಎಂದೋ ಸತ್ತು ಮಣ್ಣಾಗಿ ಹೋದ ಸೂಫಿ ಸಂತರ, ಅವುಲಿಯಾ ವೇಷಧಾರಿಗಳ ಗೋರಿಗಳನ್ನು ದರ್ಗಾಗಳಾಗಿ ಮಾಡಿ ಸಿಂಗರಿಸಿ ಹರಕೆ ಅರ್ಪಿಸಿ ದರ್ಗಾಗಳಲ್ಲಿ ಪ್ರಾರ್ಥಿಸುವುದನ್ನೇ ಧರ್ಮವಾಗಿ ಮಾಡಿಕೊಂಡಿರುವ ಮುಸ್ಲಿಮರೆಂದೆನಿಸಿಕೊಂಡವರಿಗೆ ಇಸ್ಲಾಮಿನ ಗಂಧಗಾಳಿ ಗೊತ್ತಿಲ್ಲ. ಉತ್ತರ ಕರ್ನಾಟಕದ ಹೆಚ್ಚಿನ ಕಡೆಗಳಲ್ಲಿ ಮುಸ್ಲಿರೆಂದೆನಿಸಕೊಂಡವರು ಅನ್ಯ ಮತೀಯರ ಆರಾಧ್ಯ ಮೂರ್ತಿಗಳನ್ನು ತಮ್ಮ ಮನೆಗಳಲ್ಲಿ ಪ್ರತಿಷ್ಠಾಪಿಸಿ ಪೂಜಿಸುತ್ತಾರೆ. ಅನ್ಯ ಮತೀಯರ ಹಬ್ಬ ಹರಿದಿನಗಳನ್ನು ಆಚರಿಸುತ್ತಾರೆ. ಪಾಪ, ಈ ಮಂದಿಗೆ ಇಸ್ಲಾಮ್ ಧರ್ಮದ ಕುರಿತಾಗಲಿ, ಇಸ್ಲಾಮಿನ ವಿಶ್ವಾಸ, ಆಚಾರ, ಅನುಷ್ಠಾನಗಳ ಕುರಿತಾಗಲಿ ಯಾವುದೇ ಜ್ಞಾನವಿಲ್ಲ. ಇಸ್ಲಾಮಿ ಸಂದೇಶ ಪ್ರಚಾರದ ವಕ್ತಾರರೆಂದು ಹೇಳಿಕೊಳ್ಳುವ ಸಂಘಟನೆಯೊಂದು ತನ್ನ ಚಟುವಟಿಕೆಯನ್ನು ಮಸೀದಿಯೊಳಗೆ ಸೀಮಿತಗೊಳಿಸಿದೆ.

ಕೇರಳ ಮತ್ತು ಕರಾವಳಿ ಕರ್ನಾಟಕಗಳಲ್ಲಿ ಕೇರಳ ನದ್ವತುಲ್ ಮುಜಾಹಿದೀನ್ ಮತ್ತು ಸೌತ್ ಕರ್ನಾಟಕ ಸಲಫಿ ಮೂವ್‌ಮೆಂಟ್ ಎಂಬ ಸಂಘಟನೆಗಳು ಬಿರುಸಿನ ತೌಹೀದ್ ಪ್ರಚಾರ ಮಾಡುತ್ತಿದ್ದರೂ ಮುಲ್ಲಾ, ಮುಸ್ಲಿಯಾರ್, ತಂಙಳ್‌ಗಳೆಂಬ ಪುರೋಹಿತ ಪಡೆ ಅಮಾಯಕ ಜನರನ್ನು ದರ್ಗಾ, ಉರೂಸ್, ಮಾಲೆ, ಮೌಲೀದ್, ಕುತುಬಿಯತ್, ರಾತೀಬ್, ಈದ್ ಮೀಲಾದ್, ಅಂಬಿಯಾ-ಅವುಲಿಯಾಗಳ ಹಕ್ಕ್, ಜಾಹ್, ಬರಕತ್‌ನ ಮೂಲಕ ಪ್ರಾರ್ಥನೆ ಇತ್ಯಾದಿ ಅಂಧವಿಶ್ವಾಸ, ಅನಾಚಾರ, ಮೂಢ ನಂಬಿಕೆಗಳ ಭಕ್ತರನ್ನಾಗಿ ಮಾರ್ಪಡಿಸಿ ನೈಜ ಇಸ್ಲಾಮಿನಿಂದ ದಾರಿ ತಪ್ಪಿಸಿದ್ದಾರೆ. ಹೀಗಾಗಿ ಜನರಲ್ಲಿ ದೇವಭಯ ಹಾಗೂ ಧರ್ಮಪ್ರಜ್ಞೆ ಇಲ್ಲದಂತಾಗಿದೆ. ಎಂತಹ ಅಪರಾಧ, ಅನಾಚಾರವೆಸಗಿದರೂ ದರ್ಗಾಕ್ಕೆ ಹರಕೆ ಕೊಟ್ಟರೆ ಅಥವಾ ಮೌಲೀದ್, ಕುತುಬಿಯತ್ ಆಚರಿಸಿದರೆ ಪಾಪ ವಿಮೋಚನೆಯಾಗುತ್ತದೆಂದು ಜನರು ಭಾವಿಸಿದ್ದಾರೆ. ಮರಣಾನಂತರದ ಕಬರ್ ಶಿಕ್ಷೆ, ನರಕ ಶಿಕ್ಷೆಗಳ ಭಯವನ್ನೇ ಜನರಿಂದ ಅಳಿಸಿ ಹಾಕಲಾಗಿದೆ. ಇದರಿಂದಾಗಿ ಸಮಾಜ ಬಾಹಿರ, ಧರ್ಮ ಬಾಹಿರ, ರಾಷ್ಟ್ರದ್ರೋಹದ ಕೃತ್ಯಗಳಲ್ಲಿ ಮುಸ್ಲಿಮರ ಸಂಖ್ಯೆ ಹೆಚ್ಚುತ್ತಿದ್ದು ಇತರ ಸಮುದಾಯಗಳ ಕೆಂಗಣ್ಣಿಗೆ ಮುಸ್ಲಿಮರು ಗುರಿಯಾಗುತ್ತಿದ್ದಾರೆ. ನೈಜ ಇಸ್ಲಾಮಿನತ್ತ ಮನ ಪರಿವರ್ತಿಸುತ್ತಿದ್ದ ಮುಸ್ಲಿಮ್ ಯುವ ಜನಾಂಗದ ಮೆದುಳಿಗೆ ಮತಾಂಧತೆಯ ಚುಚ್ಚು ಮದ್ದನ್ನು ಚುಚ್ಚಿ ಅನ್ಯ ಮತೀಯರ ವಿರುದ್ಧ ಎತ್ತಿ ಕಟ್ಟುವ ಕೆಲ ವಿಚ್ಛಿದ್ರಕಾರಿ ಸಂಘಟನೆಗಳು ಕಾರ್ಯಾಚರಿಸುತ್ತಿವೆ.

ಈ ರೀತಿ ಎಲ್ಲಾ ರಂಗಗಳಲ್ಲೂ ಅವನತಿಯತ್ತ ಸಾಗುತ್ತಿರುವ, ಅನ್ಯ ಸಮುದಾಯಗಳಿಂದ ಅವಹೇಳಕ್ಕೀಡಾಗುತ್ತಿರುವ, ಸರಕಾರಿ ವಲಯಗಳಲ್ಲಿ ಕಡೆಗಣಿಸಲ್ಪಡುತ್ತಿರುವ ಮುಸ್ಲಿಮ್ ಸಮುದಾಯವನ್ನು ಸಕಲ ದುರಂತಗಳಿಂದಲೂ ಪಾರು ಮಾಡಬೇಕಾದರೆ ನಮ್ಮ ಮಕ್ಕಳಿಗೆ ಬಾಲ್ಯದಲ್ಲೇ ದೇವಭಯ ಹಾಗೂ ಧರ್ಮಪ್ರಜ್ಞೆ ಮೂಡಿಸುವ ಧಾರ್ಮಿಕ-ಲೌಕಿಕ ಶಿಕ್ಷಣವನ್ನು ಜತೆಯಾಗಿಯೇ ಕೊಡಿಸಬೇಕು. ಈ ನಿಟ್ಟಿನಲ್ಲಿ ಡಾ| ಝಾಕೀರ್ ನಾಯಕ್, ಎಂ.ಎಂ. ಅಕ್ಬರ್ ಮುಂತಾದ ದಾರ್ಶನಿಕರು ಅನುಷ್ಠಾನಕ್ಕೆ ತಂದಿರುವ ಒಂದೇ ಸೂರಿನಡಿ ಧಾರ್ಮಿಕ-ಲೌಕಿಕ ಶಿಕ್ಷಣವನ್ನು ಒದಗಿಸುವ ಶಿಕ್ಷಣಾಲಯಗಳ ಸ್ಥಾಪನೆಗೆ ತೌಹೀದೀ ಸಂಘಟನೆಗಳು ಮುಂದೆ ಬರಬೇಕಾದ ಅಗತ್ಯವಿದೆ.

# ಪಕ್ಷಿ ಪ್ರಪಂಚದ ವಿಸ್ಮಯ ಕುರ್‌ಆನಿನಲ್ಲಿ!

(1ನೇ ಪುಟದಿಂದ)

ಗಮನಿಸಬೇಕು ಎಂದು ಮೇಲಿನ ವಚನಗಳಲ್ಲಿ ಅಲ್ಲಾಹು ಹೇಳುತ್ತಾನೆ: "ಪಕ್ಷಿಗಳು ಮಾನವನ ಸೇವಕರು ಮತ್ತು ಸಹಾಯಕರಾಗಿದ್ದಾರೆ. ಕೊಲಂಬಸ್‌ನ ಅಮೇರಿಕಾ ಯಾತ್ರೆಯಲ್ಲಿ ದಡ ಎಲ್ಲಿದೆಯೆಂದು ತಿಳಿಯಲಿಕ್ಕಾಗಿ ಆತನ ಹಡಗಿನಿಂದ ಗಿಳಿಯೊಂದನ್ನು ಕಳುಹಿಸಿ ಕೊಟ್ಟದ್ದು ಇತಿಹಾಸದಲ್ಲಿದೆ. ವಾಸ್ಕೋಡಿಗಾಮನ ಹಡಗಿನಲ್ಲೂ ಪಕ್ಷಿಗಳಿದ್ದವು. ಪಕ್ಷಿಗಳ ರೆಕ್ಕೆಯ ಗರಿಗಳಿಂದ ಅಲಂಕಾರ ವಸ್ತುಗಳನ್ನು ತಯಾರಿಸುತ್ತಾರೆ. ಜಪಾನಿಯರು ಮತ್ಸ್ಯ ಬೇಟೆಗಾಗಿ ಜಲ ಪಕ್ಷಿಯಾದ ನೀರ್ಕಾಗೆಯನ್ನು ಬಳಸುತ್ತಾರೆ. ಅಮೇರಿಕದ ರಾಷ್ಟ್ರಾಧ್ಯಕ್ಷ ನಾಗಿದ್ದ ಅಬ್ರಹಾಂ ಲಿಂಕನ್‌ನ ಮರಣದ ವಿಷಯ ಜಗತ್ತಿಗೆ ತಿಳಿದದ್ದು ಹಲವು ದಿನಗಳ ಬಳಿಕ ಪಾರಿವಾಳಗಳು ಸುದ್ದಿ ಹರಡಿದ ನಂತರ ವಾಗಿತ್ತು.

ಪಕ್ಷಿಗಳ ಮಾಂಸವನ್ನು ಮಾನವರು ಆಹಾರಕ್ಕಾಗಿ ಉಪಯೋಗಿಸುತ್ತಾರೆ. ಸ್ವರ್ಗದಲ್ಲಿ ಅತ್ಯಧಿಕವಾಗಿ ಲಭಿಸುವ ಹಣ್ಣು ಹಂಪಲು, ಮಾಂಸಗಳ ಕುರಿತು ಕುರ್‌ಆನಿನಲ್ಲಿ ಹೇಳಲಾಗಿದೆ. (ಕುರ್‌ಆನ್ 52:22). ಸ್ವರ್ಗದಲ್ಲಿ ಅವರು ಇಚ್ಛಿಸುವಂತಹ ವಿಧಗಳಲ್ಲಿ ಪಕ್ಷಿಗಳ ಮಾಂಸವಿದೆ. (ಕುರ್‌ಆನ್ 56:21). ಚೈನಾದಲ್ಲಿ ಪಕ್ಷಿಗಳ ಮಾಂಸ ಮಾತ್ರವಲ್ಲ, ಸ್ವಿಫ್ಟ್ ಎಂಬ ಜಾತಿಯ ಪಕ್ಷಿಗಳ ಗೂಡನ್ನು ಸಹಾ ಸೂಪ್ ಮಾಡಿ ಕುಡಿಯುತ್ತಾರೆ. ಪಕ್ಷಿಗಳ ಸೇವೆ ಬಹಳಷ್ಟಿದೆ. ಪುಷ್ಪ ಪರಾಗ ಸಿಂಪಡಿಸುವುದು, ಬೀಜ ವಿತರಿಸುವುದು, ಮೊಟ್ಟೆಯಿಡುವುದು ಇತ್ಯಾದಿ ಬಹಳಷ್ಟು ಪ್ರಯೋಜನಗಳು ಪಕ್ಷಿಗಳಿಂದ ಲಭಿಸುತ್ತವೆ. ಇಂದು ಪಕ್ಷಿ ಪ್ರಪಂಚದ ವೈಜ್ಞಾನಿಕ ಸಂಶೋಧನೆಗಳು ಒಂದು ಹವ್ಯಾಸವಾಗಿದೆ. ಈ ಹವ್ಯಾಸವನ್ನು ಇಸ್ಲಾಮ್ ವಿರೋಧಿಸುವುದಿಲ್ಲ. ಮುಂಚೆಲ್ಲಾ ಪಕ್ಷಿಗಳನ್ನು ಜೀವಂತ ಹಿಡಿದು ಅಥವಾ ಗುಂಡಿಟ್ಟು ಬೀಳಿಸಿ ಪರಿಶೋಧಿಸುತ್ತಿದ್ದರು. ಗೂಡುಗಳಿಂದಲೂ ಹಿಡಿದು ಪರಿಶೋಧಿಸುತ್ತಿದ್ದರು. ಪ್ರವಾದಿ(ಸ)ರು ಹೇಳಿರುವರು: "ಗೂಡುಗಳಲ್ಲಿರುವ ಪಕ್ಷಿಗಳನ್ನು ತೊಂದರೆಗೊಳಿಸಬೇಡಿರಿ" (ಅಬೂದಾವೂದ್). ಪಕ್ಷಿಗಳ ಮರಿಗಳನ್ನು ಗೂಡುಗಳಿಂದ ಹೊರ ತೆಗೆದು ಪರಿಶೋಧಿಸುವ ರೀತಿಯೂ ಮೊದಲಿತ್ತು. ಇದನ್ನು ಇಸ್ಲಾಮ್ ಅಂಗೀಕರಿಸುವುದಿಲ್ಲ.

ಅಬ್ದುರ್ರಹ್ಮಾನುಬ್‌ನು ಅಬ್ದುಲ್ಲಾ(ರ)ರು ತನ್ನ ತಂದೆಯಿಂದ ವರದಿ ಮಾಡುತ್ತಾರೆ: "ನಾವು ಪ್ರವಾದಿ(ಸ)ರೊಂದಿಗೆ ಒಂದು ಪ್ರಯಾಣದಲ್ಲಿದ್ದೆವು. ಅವರ ಕೆಲವು ಅವಶ್ಯಕತೆಗಳಿಗಾಗಿ ನಾವು ಹೋದಾಗ ಅಲ್ಲೊಂದು ಗಿಳಿಯನ್ನೂ ಅದರ ಎರಡು ಮರಿಗಳನ್ನೂ ಕಂಡೆವು. ನಾವು ಆ ಮರಿಗಳನ್ನು ಎತ್ತಿಕೊಂ ಡೆವು. ಆಗ ಅದರ ತಾಯಿ ಸುತ್ತಿ ಸುತ್ತಿ ಹಾರಾಡತೊಡಗಿತು. ಈ ದೃಶ್ಯವನ್ನು ಕಂಡ ಪ್ರವಾದಿ(ಸ)ರು ಅದರ ಮರಿಗಳನ್ನು ನೋಯಿಸಿದ್ದು ಯಾರು? ಅವುಗಳನ್ನು ತಾಯಿಯ ಬಳಿ ಬಿಟ್ಟು ಬನ್ನಿರಿ" ಎಂದು ಹೇಳಿದರು. ಇರುವೆಗಳ ಸಾಲುಗಳಿಗೆ ಬೆಂಕಿ ಹಚ್ಚಿದ್ದನ್ನು ಕಂಡ ಪ್ರವಾದಿಯವರು "ಇದಕ್ಕೆ ಬೆಂಕಿ ಕೊಟ್ಟದ್ದು ಯಾರು? ಎಂದು ಕೇಳಿದಾಗ "ನಾವು ಪ್ರವಾದಿಯವರೇ" ಎಂದೆವು. ಆಗ ಪ್ರವಾದಿ(ಸ)ರು ಹೇಳಿದರು: "ಬೆಂಕಿಯ ಒಡೆಯನ ಹೊರತು ಬೇರಾರಿಗೂ ಬೆಂಕಿಯಿಂದ ಶಿಕ್ಷಿಸಲು ಅಧಿಕಾರವಿಲ್ಲ". (ಅಬೂದಾವೂದ್)

ಬೈನೋಕುಲರ್ ಮತ್ತು ಝೂಂ ಕ್ಯಾಮರಾಗಳನ್ನು ಕಂಡು ಹಿಡಿಯುವುದರೊಂದಿಗೆ ಇದೀಗ ಪಕ್ಷಿಗಳನ್ನು ತೊಂದರೆಗೀಡು ಮಾಡದೆ ದೂರದಿಂದಲೇ ಸಂಶೋಧನೆ ಮಾಡುವ ವ್ಯವಸ್ಥೆಯಿದೆ. ಜಗತ್ತಿನಲ್ಲಿ ಪ್ರಥಮವಾಗಿ ಪಕ್ಷಿಗಳ ಸಂಶೋಧನೆ ಆರಂಭಗೊಂಡದ್ದು ಇಂಗ್ಲೇಂಡಿನಲ್ಲಾಗಿದೆ. ಆ ಬಳಿಕ ಇದು ಅಮೇರಿಕಾ, ಸ್ಕಾಂಡಿನೇವಿಯನ್ ದೇಶಗಳು, ಹೋಲೆಂಡ್, ಜರ್ಮನಿ, ಸ್ವಿಟ್ಸರ್‌ಲೇಂಡ್ ಮುಂತಾದ ರಾಷ್ಟ್ರಗಳಿಗೂ ವ್ಯಾಪಿಸಿತು. ಕಳೆದ ಒಂದು ಶತಮಾನದಿಂದೀಚೆಗಷ್ಟೇ ವೈಜ್ಞಾನಿಕ ಸಂಶೋಧನೆಯನ್ನಾರಂಭಿಸಿದ್ದಾದರೂ ಪವಿತ್ರ ಕುರ್‌ಆನ್ ಹದಿನಾಲ್ಕು ಶತಮಾನಗಳ ಹಿಂದೆಯೇ ಪಕ್ಷಿಗಳನ್ನು ವೈಜ್ಞಾನಿಕವಾಗಿ ಪರಿಶೋಧಿಸಲು ಸೂಚಿಸಿದೆ.

ನಾವು ಯಾಕಾಗಿ ಪಕ್ಷಿಗಳ ಸಂಶೋಧನೆ ಮಾಡಬೇಕು? ಮನಃಸಂತೃಪ್ತಿಗಾಗಿ, ದೇವನ ಸೃಷ್ಟಿ ವೈಭವಗಳನ್ನು ಮನಗಾಣಲಿಕ್ಕಾಗಿ, ಪಕ್ಷಿಯನ್ನು ಗುರುವಾಗಿ ಸ್ವೀಕರಿಸಲಿಕ್ಕಾಗಿ ಮತ್ತು ಪಕ್ಷಿ ಲಕ್ಷಣ ಅಂಧವಿಶ್ವಾಸವೆಂದು ಸಮರ್ಥಿಸಲಿಕ್ಕಾಗಿ ಪಕ್ಷಿಗಳನ್ನು ವೈಜ್ಞಾನಿಕವಾಗಿ ಸಂಶೋಧಿಸುವ ಅಗತ್ಯವಿದೆ. ಪ್ರಕೃತಿಯು ಅಲಂಕೃತವಾಗಿದೆ. ಅದನ್ನು ಅವಲೋಕಿಸುವುದರಲ್ಲಿ ಸಂತೃಪ್ತಿಯಿದೆ, ಆವರ್ತಿತ ಅವಲೋಕನದ ಅಗತ್ಯವಿದೆ ಎಂದು ಕುರ್‌ಆನ್ ನೆನಪಿಸುತ್ತದೆ. "ಹಾಗಾದರೆ ಅವರು ತಮಗಿಂತ ಮೇಲಿರುವ ಆಕಾಶದ ಕಡೆಗೆ ನೋಡುವುದಿಲ್ಲವೇ, ಅದನ್ನು ನಾವು ಹೇಗೆ ನಿರ್ಮಿಸಿದೆವು ಮತ್ತು ಅಲಂಕರಿಸಿದೆವು?" (ಕುರ್‌ಆನ್ 50:6) "ಆಕಾಶದಲ್ಲಿ ನಾವು ಹಲವು ನಕ್ಷತ್ರ ಮಂಡಲಗಳನ್ನು ಮಾಡಿರುತ್ತೇವೆ ಮತ್ತು ಅವುಗಳನ್ನು ನಾವು ನೋಡುವವರಿಗಾಗಿ ಅಲಂಕರಿಸಿದ್ದೇವೆ." (ಕುರ್‌ಆನ್ 15:16) "ಆಕಾಶವನ್ನು ನೀವು ಪುನಃ ಎರಡು ಬಾರಿ (ನಿಮ್ಮ ದೃಷ್ಟಿಯನ್ನು) ತಿರುಗಿಸಿ (ನೋಡಿರಿ)" (ಕುರ್‌ಆನ್ 67:3) ಎಂದು ಅಲ್ಲಾಹು ಪ್ರಕೃತಿಯ ಕುರಿತು ಆವರ್ತಿಸಿ ವೀಕ್ಷಿಸಲು ಹೇಳುತ್ತಾನೆ.

(6ನೇ ಪುಟಕ್ಕೆ)

# ತೌಹೀದ್ ಮತ್ತು ಪ್ರವಾದಿಗಳು – 2

ಶೌಕತ್ತಲಿ, ದಮಾಮ್

**ಪ್ರವಾದಿ ಹೂದ್(ಅ):** ಪ್ರವಾದಿ ನೂಹ್(ಅ)ರವರ ನಂತರ ಹಲವು ಪ್ರವಾದಿಗಳನ್ನು ನಿಯೋಜಿಸಿದ್ದಾಗಿ ಪವಿತ್ರ ಕುರ್‌ಆನ್ ಸ್ಪಷ್ಟ ಪಡಿಸುತ್ತದೆ.

"ನೂಹರ ತರುವಾಯ ನಾವು ಬೇರೆ ಬೇರೆ ಸಂದೇಶವಾಹಕರನ್ನು ಅವರ ಜನಾಂಗಗಳ ಕಡೆಗೆ ರವಾನಿಸಿದೆವು. ಅವರೆಲ್ಲಾ ಅವರ ಬಳಿಗೆ ಸುಸ್ಪಷ್ಟ ದೃಷ್ಟಾಂತಗಳ ಸಹಿತ ಬಂದರು. ಆದರೆ ಅವರು ಈ ಮುಂಚೆ ಸುಳ್ಳಾಗಿಸಿದ್ದನ್ನು ಮತ್ತೆ ಸ್ವೀಕರಿಸ ಲಿಲ್ಲ. ಹೀಗೆ ಹದಮೀರಿ ಸಾಗುವವರ ಹೃದಯ ಗಳಿಗೆ ನಾವು ಮುದ್ರೆಯೊತ್ತಿ ಬಿಡುತ್ತೇವೆ". (ಯೂನುಸ್ 74)

ಆ ಪ್ರವಾದಿಗಳ ಬಾಧ್ಯತೆ ಏನಾಗಿತ್ತೆಂಬು ದನ್ನು ಅಲ್ಲಾಹನು ಪವಿತ್ರ ಕುರ್‌ಆನಿನಲ್ಲಿ ವಿವರಿಸಿದ್ದಾನೆ: "ವಿಷಯಗಳನ್ನು ಸುಸ್ಪಷ್ಟವಾಗಿ ತಲುಪಿಸುವ ಹೊರತು ಬೇರಾವ ಹೊಣೆಗಾರಿಕೆ ಯಾದರೂ ಸಂದೇಶವಾಹಕರ ಮೇಲೆ ಇದೆಯೇ?" (ಅನ್ನಹ್ಲ್ 35) ಇದುವೇ ಅವರ ಭೋದನೆಯ ವಿಷಯ.

"ನಾವು ಪ್ರತಿಯೊಂದು ಸಮುದಾಯದಲ್ಲಿ ಓರ್ವ ಸಂದೇಶವಾಹಕರನ್ನು ಕಳುಹಿಸಿದೆವು. ನೀವು ಅಲ್ಲಾಹನ ಇಬಾದತ್(ಆರಾಧನೆ) ಮಾಡಿರಿ ಮತ್ತು 'ತಾಗೂತ್'ನಿಂದ ಬಿಟ್ಟು ನಿಲ್ಲಿರಿ" ಎಂದು ಅವರ ಮುಖಾಂತರ ಎಚ್ಚರಿಕೆ ನೀಡಿದೆವು. ಅನಂತರ ಅಲ್ಲಾಹ್ ಕೆಲವರಿಗೆ ಸನ್ಮಾರ್ಗದರ್ಶನ ಮಾಡಿದನು ಮತ್ತು ಇನ್ನು ಕೆಲವರ ಮೇಲೆ ಪಥಭ್ರಷ್ಟತೆ ಹೇರಲ್ಪಟ್ಟಿತು. ಹೀಗೆ ಸುಳ್ಳಾಗಿಸುವವರ ಅಂತಿಮ ಪರಿಣಾಮ ವೇನಾಗಿದೆಯೆಂದು ಭೂಮಿಯ ಮೇಲೆ ಸಂಚರಿಸಿ ನೋಡಿಕೊಳ್ಳಿರಿ." (ಅನ್ನಹ್ಲ್ 36)

ಎಲ್ಲಾ ಪ್ರವಾದಿಗಳೂ ಪ್ರಪ್ರಥಮವಾಗಿ ಉಪದೇಶ ನೀಡಿದ್ದು ತೌಹೀದ್ ಆಗಿತ್ತು. ಸೃಷ್ಟಿಕರ್ತನೂ ಸಂರಕ್ಷಕನೂ ಆದ ಅಲ್ಲಾಹ ನನ್ನು ಮಾತ್ರ ಆರಾಧಿಸಬೇಕು. ಅವನಲ್ಲದ ಎಲ್ಲಾ ಶಕ್ತಿಗಳನ್ನೂ ವ್ಯಕ್ತಿಗಳನ್ನೂ ಪ್ರತೀಕ ಗಳನ್ನೂ ವಸ್ತುಗಳನ್ನೂ ಆರಾಧಿಸುವುದರಿಂದ ಪೂರ್ಣವಾಗಿಯೂ ದೂರವಾಗಬೇಕು. ಇದು ಲೋಕಾಂತ್ಯದ ವರೆಗಿನ ಉಪದೇಶಕರಿಗೆ ನಿರ್ವಹಿಸಲಿಕ್ಕಿರುವ ದೌತ್ಯದೆಡೆಗೆ ಬೆರಳು ತೋರಿಸುತ್ತದೆ.

ಪ್ರವಾದಿ ನೂಹ್(ಅ)ರವರ ಬಳಿಕ ಬಂದ ಪ್ರವಾದಿ ಹೂದ್(ಅ)ರವರ ಕುರಿತು ಅಲ್ಲಾಹು ಹೇಳುತ್ತಾನೆ: ನಾವು ಆದ್ ಜನಾಂಗದೆಡೆಗೆ ಅವರ ಸಹೋದರ ಹೂದ್‌ರನ್ನು ಕಳುಹಿಸಿದೆವು. ಅವರು ಹೀಗೆಂದರು: "ಓ ನನ್ನ ಜನಾಂಗವೇ ಅಲ್ಲಾಹನ ಆರಾಧನೆ ಮಾಡಿರಿ. ಅವನ ಹೊರತು ಇನ್ನಾರೂ ನಿಮ್ಮ ಆರಾಧ್ಯರಿಲ್ಲ. ನೀವು ಕೇವಲ ಸುಳ್ಳು ಆರೋಪಗಳನ್ನೇ ಕಟ್ಟಿಕೊಂಡಿರುವಿರಿ." (ಹೂದ್ 50)

"ಆದ್ ಸಹೋದರರ (ಹೂದ್‌ರ) ವೃತ್ತಾಂತವನ್ನು ತಿಳಿಸಿರಿ. ಅವರಿಗೆ "ಅಹ್‌ಕಾಫ್" ನಲ್ಲಿ ಮುನ್ನೆಚ್ಚರಿಕೆ ಕೊಟ್ಟ ಸಂದರ್ಭ. ಅವರಿಗೆ ಮುನ್ನವೂ ಅವರ ನಂತರವೂ ಮುನ್ನೆಚ್ಚರಿಕೆ ಕೊಡುವವರು ಗತಿಸಿ ಹೋಗಿದ್ದರು. (ಅವರು ಹೇಳಿದರು). "ಅಲ್ಲಾಹನ ಹೊರತು ಇನ್ನಾರಿಗೂ ಇಬಾದತ್ ಮಾಡದಿರಿ". ನನಗೆ ನಿಮ್ಮ ವಿಷಯ ದಲ್ಲಿ ಒಂದು ಭಯಾನಕ ದಿನದ ಯಾತನೆಯ ಭಯವಿದೆ" ಎಂದು ಅವರು ಎಚ್ಚರಿಕೆ ಕೊಟ್ಟಿದ್ದರು. (ಅಲ್ ಅಹ್‌ಕಾಫ್ 21)

ಪ್ರವಾದಿ ಹೂದ್(ಅ) ತನ್ನ ಆದ್ ಜನಾಂಗವನ್ನು ಆಹ್ವಾನಿಸಿದ್ದು ತೌಹೀದ್‌ಗೂ ಅಲ್ಲಾಹನ ಕಡೆಗೂ ಪಾರತ್ರಿಕ ಶಿಕ್ಷೆಯ ಕುರಿತಾಗಿರುವ ಚಿಂತನೆಯ ಕಡೆಗೂ ಆಗಿತ್ತು. ಆದರೆ ಧಿಕ್ಕಾರಿಗಳಾದ ಆ ಜನತೆ ಅವರನ್ನು ಸುಳ್ಳಾಗಿಸಿ ಕಪಟನೆಂದು ಹೇಳಿದ್ದು, ಹೂದ್(ಅ)ರವರು ಸಹಾಯಕ್ಕಾಗಿ ಅಲ್ಲಾಹನೊಂಡನೆ ಪ್ರಾರ್ಥಿಸಿದ್ದು, ಅವರಲ್ಲಿನ ಅಕ್ರಮಿಗಳನ್ನು ಅಲ್ಲಾಹ್ ನಾಶಪಡಿಸಿದ್ದು, ಎಲ್ಲವನ್ನೂ ಪವಿತ್ರ ಕುರ್‌ಆನ್ ಹೀಗೆ ವಿಷದೀಕರಿಸಿದೆ.

ಅಲ್ಲಾಹನ ಬಗ್ಗೆ ಸುಳ್ಳಾರೋಪ ಹೊರಿಸು ತ್ತಿರುವ ಮನುಷ್ಯ ಈತ. ನಾವೆಂದಿಗೂ ಇವನನ್ನು ನಂಬುವವರಲ್ಲ. (ಕುರ್‌ಆನ್ 23:38)

ಸಂದೇಶವಾಹಕರು ಹೇಳಿದರು: "ನನ್ನ ಪ್ರಭೂ, ಈ ಜನ ನನ್ನನ್ನು ಸುಳ್ಳಾಗಿಸಿದ್ದಾರೆ. ಈಗ ನೀನೇ ನನಗೆ ಸಹಾಯ ಮಾಡು! (ಕುರ್‌ಆನ್ 23:39). (ಉತ್ತರವಾಗಿ) "ಇವರು ತಮ್ಮ ಕರ್ಮ ಗಳಿಗಾಗಿ ಪಶ್ಚಾತ್ತಾಪ ಪಡುವ ಸಮಯ ಸಮೀಪಿಸಿದೆ." (ಕುರ್‌ಆನ್ 23:40)

ಹಾಗೆ ಸಂಪೂರ್ಣ ನ್ಯಾಯದೊಂದಿಗೆ ಅವರನ್ನು ಒಂದು (ಭಯಂಕರ) ಚೀತ್ಕಾರವು ಬಿಗಿಯಾಗಿ ಹಿಡಿದು ಬಿಟ್ಟಿತು ಮತ್ತು ನಾವು ಅವರನ್ನು ಕಸವನ್ನಾಗಿ ಮಾಡಿಬಿಟ್ಟೆವು. ಅಕ್ರಮಿ ಜನಾಂಗ ತೊಲಗಲಿ. (ಕುರ್‌ಆನ್ 23:41)

ಹಲವು ಅವಕಾಶಗಳನ್ನು ನೀಡಿದರೂ ಎಲ್ಲಾ ರೀತಿಯ ಎಚ್ಚರಿಕೆಗಳನ್ನು ಧಿಕ್ಕರಿಸಿದ ಅಕ್ರಮಿಗಳನ್ನು ಅಲ್ಲಾಹನು ನಾಶಪಡಿಸಿದನು.

**ಪ್ರವಾದಿ ಸ್ವಾಲಿಹ್(ಅ):** ಅದರ ನಂತರ "ಸಮೂದ್" ಸಮುದಾಯಕ್ಕೆ "ಪ್ರವಾದಿ ಸ್ವಾಲಿಹ್"(ರ)ರವರನ್ನೂ ನಿಯೋಜಿಸಿದ್ದು, ಆ ಪ್ರವಾದಿಯನ್ನು ಅವರು ಧಿಕ್ಕರಿಸಿದ್ದು, ದೃಷ್ಟಾಂತ ವಾಗಿ ಒಂಟೆಯನ್ನು ಕಳುಹಿಸಿದ್ದು, ಅಕ್ರಮಿಗಳು ಅದನ್ನು ಕಡಿದುಕೊಂದದ್ದು, ಅವರಿಗೆ ಕಠಿಣ ಶಿಕ್ಷೆ ಎರಗಿದ್ದು, ಅವರು ನಾಶಗೊಂಡದ್ದು ಎಲ್ಲ ವನ್ನೂ ಪವಿತ್ರ ಕುರ್‌ಆನಿನ ವಿವಿಧ ಸ್ಥಳಗಳಲ್ಲಿ ಪ್ರತಿಪಾದಿಸಲಾಗಿದೆ.

"ಸಮೂದ್" (ಜನಾಂಗದವರ) ಕಡೆಗೆ ನಾವು ಅವರ ಸಹೋದರ ಸ್ವಾಲಿಹ್‌ರನ್ನು ಕಳುಹಿಸಿದೆವು. ಅವರು ಹೇಳಿದರು: "ಓ ನನ್ನ ಜನಾಂಗವೇ, ಅಲ್ಲಾಹನ ಆರಾಧನೆ ಮಾಡಿರಿ. ಅವನ ಹೊರತು ನಿಮ್ಮ ಆರಾಧ್ಯನಾರೂ ಇಲ್ಲ. ನಿಮ್ಮ ಬಳಿಗೆ ನಿಮ್ಮ ಪ್ರಭುವಿನ ಕಡೆಯಿಂದ ಸ್ಪಷ್ಟ ಪ್ರಮಾಣ" ಬಂದಿರುತ್ತದೆ. ಅಲ್ಲಾಹನ ಈ ಹೆಣ್ಣೊಂಟೆಯು ನಿಮಗೊಂದು ದೃಷ್ಟಾಂತದ ರೂಪದಲ್ಲಿದೆ. ಆದುದರಿಂದ ಅಲ್ಲಾಹನ ಭೂಮಿ ಯಲ್ಲಿ ಇದನ್ನು ಮೇಯಲು ಬಿಡಿರಿ. ದುರುದ್ದೇಶದಿಂದ ಇದನ್ನು ಮುಟ್ಟಬೇಡಿರಿ.

ಅನ್ಯಥಾ ಒಂದು ವೇದನಾಯುಕ್ತ ಯಾತನೆ ನಿಮ್ಮನ್ನು ಆಕ್ರಮಿಸುವುದು". (ಅಲ್ ಅಅ್‌ರಾಫ್ 73)

ತರುವಾಯ ಅವರು ಈ ಹೆಣ್ಣೊಂಟೆ ಯನ್ನು ಕೊಂದು ಹಾಕಿದರು. ಮತ್ತು ತಮ್ಮ ಪ್ರಭುವಿನ ಆಜ್ಞೆಯನ್ನು ಸಂಪೂರ್ಣ ಧಿಕ್ಕರಿಸಿ ನಡೆದರು. ಸ್ವಾಲಿಹ್‌ರೊಂದಿಗೆ ಹೀಗೆಂದರು: "ನೀವು ನಿಜಕ್ಕೂ ಸಂದೇಶವಾಹಕರಲ್ಲಾಗಿರುವಿರಾದರೆ, ನೀವು ನಮಗೆ ಬೆದರಿಕೆ ಹಾಕುತ್ತಿರುವ ಆ ಯಾತನೆಯನ್ನು ತನ್ನಿರಿ". (ಅಲ್ ಅಅ್‌ರಾಫ್ 77)

"ಕೊನೆಗೆ ನಡುಗಿಸಿ ಬಿಡುವಂತಹಾ ವಿಪತ್ತೊಂದು ಅವರ ಮೇಲೆ ಬಂದೆರಗಿತು ಮತ್ತು ಅವರು ತಮ್ಮ ಮನೆಗಳಲ್ಲಿ ಅಧೋಮುಖರಾಗಿ ಬಿದ್ದಲ್ಲೇ ಬಿದ್ದು ಬಿಟ್ಟರು.", ಸ್ವಾಲಿಹ್‌ರು: "ಓ ನನ್ನ ಜನಾಂಗವೇ, ನಾನು ನನ್ನ ಪ್ರಭುವಿನ ಸಂದೇಶವನ್ನು ನಿಮಗೆ ತಲುಪಿಸಿಬಿಟ್ಟೆ. ನಾನು ನಿಮಗೆ ಸಾಕಷ್ಟು ಹಿತೋಪದೇಶ ನೀಡಿದೆ. ಆದರೆ, ನೀವು ನಿಮ್ಮ ಹಿತ ಚಿಂತಕನನ್ನು ಮೆಚ್ಚದೆ ಹೋದರೆ ನಾನೇನು ಮಾಡಲಿ" ಎನ್ನುತ್ತಾ ಅವರು ನಾಡುಗಳಿಂದ ಹೊರಟು ಹೋಗಿ ಬಿಟ್ಟರು." (ಅಲ್ ಅಅ್‌ರಾಫ್ 78, 79)

**ಪ್ರವಾದಿ ಲೂತ್(ಅ):** ಆ ಬಳಿಕ ನಿಯೋಜಿಸಲ್ಪಟ್ಟ ಪ್ರವಾದಿ ಲೂತ್(ಅ)ರವರ ಕುರಿತು ಪವಿತ್ರ ಕುರ್‌ಆನಿನಲ್ಲಿ ಬಹಳಷ್ಟು ಪ್ರಸ್ತಾವನೆಗಳಿವೆ. ಕೆಲ ಉದಾಹರಣೆಗಳು ಈ ಕೆಳಗಿನಂತಿವೆ:

"ನಾನು ನಿಮ್ಮ ಪಾಲಿಗೆ ಓರ್ವ ಪ್ರಾಮಾಣಿಕ ಸಂದೇಶವಾಹಕನಾಗಿರುತ್ತೇನೆ. ಆದುದರಿಂದ ನೀವು ಅಲ್ಲಾಹನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ." (ಅಶ್ಶುಅರಾ 162, 163)

"ಲೂತರ ಜನಾಂಗವು ಪ್ರವಾದಿಯವರನ್ನು ಸುಳ್ಳಾಗಿಸಿದರು. (ಅಶ್ಶುಅರಾ 160). ತನ್ನೆಲ್ಲಾ ಪ್ರಯತ್ನಗಳು ವಿಫಲವಾದಾಗ ಪ್ರವಾದಿ ಲೂತ್(ಅ)ರವರು ಅಲ್ಲಾಹನೊಡನೆ ಪ್ರಾರ್ಥಿಸುತ್ತಾರೆ. ಪ್ರಭೂ, ನನ್ನನ್ನೂ ನನ್ನ ಕುಟುಂಬ ವನ್ನೂ ಇವರು ಮಾಡುತ್ತಿರುವ ದುರಾಚಾರ ಗಳಿಂದ ರಕ್ಷಿಸು." (ಅಶ್ಶುಅರಾ 169)

"ಅನಂತರ ಉಳಿದವರನ್ನೆಲ್ಲಾ ನಾಶ ಗೊಳಿಸಿ ಬಿಟ್ಟೆವು ಮತ್ತು ಅವರ ಮೇಲೆ ಒಂದು ಮಳೆಯನ್ನು ಸುರಿಸಿದೆವು. ಎಚ್ಚರಿಕೆ ಕೊಟಲ್ಪಟ್ಟಿದ್ದವರ ಮೇಲೆ ಇಳಿದಂತಹ ಅತ್ಯಂತ ಕೆಟ್ಟ ಮಳೆ." (ಅಶ್ಶುಅರಾ 172, 173)

ಪ್ರವಾದಿ ಲೂತ್(ಅ)ರವರು ಬೋಧಿಸಿದ್ದು ತೌಹೀದನ್ನೇ ಆಗಿತ್ತು. ಆದರೆ ಜನರು ಆಯ್ಕೆ ಮಾಡಿದ್ದು ಸ್ವೇಚ್ಛೆಯನ್ನಾಗಿತ್ತು. ಅದಕ್ಕಾಗಿ ಅವರಲ್ಲಿನ ಅಕ್ರಮಿಗಳನ್ನು ಅಲ್ಲಾಹ್ ನಾಶಪಡಿಸಿದನು.

**ಪ್ರವಾದಿ ಶುಐಬ್(ಅ):** "ನಾವು ಮದ್‌ಯನ್‌ನವರ ಕಡೆಗೆ ಅವರ ಬಂಧು ಶುಐಬರನ್ನು ಕಳುಹಿಸಿದೆವು. ಅವರು (ಹೀಗೆ) ಹೇಳಿದರು: "ಓ ನನ್ನ ಜನಾಂಗದವರೇ, ಅಲ್ಲಾಹನ ಆರಾಧನೆ ಮಾಡಿರಿ. ಅವನ ಹೊರತು ಇನ್ನಾರೂ ನಿಮ್ಮ ಆರಾಧ್ಯರಿಲ್ಲ. ನೀವು ಅಳತೆ ಮತ್ತು ತೂಕದಲ್ಲಿ ಕಡಿಮೆ ಮಾಡಬೇಡಿರಿ. (ಇಂದು) ನಾನು ನಿಮ್ಮನ್ನು ಉತ್ತಮ ಸ್ಥಿತಿಯಲ್ಲಿ ಕಾಣುತ್ತಿದ್ದೇನೆ. (ಆದರೆ) ನಾಳೆ ನಿಮ್ಮ ಮೇಲೆ ಎಲ್ಲರನ್ನೂ ಆವರಿಸಿಕೊಳ್ಳುವ ಯಾತನೆಯ ದಿನ ವೊಂದು ಬರಲಿರುವ ವಿಷಯದಲ್ಲಿ ನಾನು ಭಯ ಪಡುತ್ತೇನೆ" (ಹೂದ್ 84)

ಪ್ರವಾದಿ ಶುಐಬ್(ಅ)ರವರು ತನ್ನ ಜನಾಂಗದವರನ್ನು ಆಹ್ವಾನಿಸಿದ್ದು ತೌಹೀದ್‌ನ ಕಡೆಗೇ ಆಗಿತ್ತು. ಆದರೆ ಆ ಜನರು ತಮ್ಮ ಪೂರ್ವಿಕರು ಆರಾಧಿಸಿಕೊಂಡಿದ್ದುದನ್ನು ಉಪೇಕ್ಷಿಸಲು ಸಿದ್ಧರಾಗಲಿಲ್ಲ. ಆದ್ದರಿಂದ ಅಲ್ಲಾಹನ ತೀರ್ಮಾನಕ್ಕಾಗಿ ಕಾಯಲು ಪ್ರವಾದಿ ಶುಐಬ್(ಅ)ರವರು ನಿರ್ಧರಿಸುತ್ತಾರೆ. ಅಲ್ಲಾಹು ಹೇಳುತ್ತಾನೆ: "ಕೊನೆಗೆ ಶಿಕ್ಷೆಯ ಕುರಿತಾದ ನಮ್ಮ ತೀರ್ಮಾನದ ಸಮಯ ಬಂದಾಗ ನಾವು ನಮ್ಮ ಕೃಪೆಯಿಂದ ಶುಐಬ್ ಮತ್ತು ಅವರ ಸತ್ಯ ವಿಶ್ವಾಸಿಗಳಾದ ಸಂಗಡಿಗರನ್ನು ರಕ್ಷಿಸಿದೆವು ಮತ್ತು ಅಕ್ರಮವೆಸಗಿದವರನ್ನು ಒಂದು ಭಯಾನಕ ಸ್ಫೋಟವು ಆಕ್ರಮಿಸಿತು. ಆ ನಾಡಿನವರು ಅಲ್ಲಿ ನೆಲೆಸಿಯೇ ಇರಲಿಲ್ಲವೋ ಎಂಬಂತೆ ಅವರು ಕದಲದೆ ಇದ್ದಲ್ಲೇ ಬಿದ್ದುಬಿಟ್ಟರು. ಕೇಳಿರಿ, ಸಮೂದ್ ಎಸೆಯಲ್ಪಟ್ಟಂತೆ ಮದ್‌ಯನಿಯವರೂ ದೂರ ಎಸೆಯಲ್ಪಟ್ಟರು." (ಹೂದ್ 94-95)

ಧಿಕ್ಕಾರಿಗಳ ಅಂತ್ಯ ಎಷ್ಟು ಭೀಕರವಾದುದೆಂಬುದನ್ನು ಆಧುನಿಕ ಧಿಕ್ಕಾರಿಗಳು ಮನಗಾಣಬೇಕು. ●

# ಇತರರು ನಿಮಗಾಗಿ ನಮಾಝ್ ಮಾಡುವ ಮೊದಲು ನೀವು ನಿಮಗಾಗಿ ನಮಾಝ್ ಮಾಡಿರಿ!

✍ ಮುಹಮ್ಮದ್ ಮುಝುಮ್ಮಿಲ್, ಮಂಗಳೂರು

ಪುನರುತ್ಥಾನದಂದು ನರಕ ಶಿಕ್ಷೆ ವಿಧಿಸಲ್ಪಟ್ಟ ಹತಭಾಗ್ಯರೊಡನೆ ಸ್ವರ್ಗವಾಸಿಗಳು ಕೇಳುವ ಒಂದು ಪ್ರಶ್ನೆಗೆ ನರಕದವರು ಉತ್ತರಿಸುವುದನ್ನು ಕುರ್‌ಆನಿನಲ್ಲಿ ಈ ರೀತಿ ವಿವರಿಸಲಾಗಿದೆ:

"ನಿಮ್ಮನ್ನು ನರಕಕ್ಕೆ ಪ್ರವೇಶಗೊಳಿಸಿದ್ದು ಯಾವುದು"?

"ಅವರು (ನರಕದವರು): "ನಾವು ನಮಾಝ್ ಮಾಡುವವರೊಂದಿಗಿರಲಿಲ್ಲ. ಬಡವರಿಗೆ ಆಹಾರ ಕೊಡುತ್ತಿರಲಿಲ್ಲ , ಅನರ್ಥದ ಮಾತುಗಳಲ್ಲಿ ಮಗ್ನರಾಗಿದ್ದವರೊಂದಿಗೆ ನಾವೂ ಮಗ್ನರಾಗಿದ್ದೆವು ಮತ್ತು ಪ್ರತಿಫಲದ ದಿನವನ್ನು ನಾವು ಸುಳ್ಳಾಗಿಸಿದ್ದೆವು. ಹೀಗೆ (ಮರಣವೆಂಬ ಆ) ಖಚಿತ (ವಿಷಯ)ವು ನಮಗೆ ಬಂದು ಬಿಟ್ಟಿತು" (ಕುರ್‌ಆನ್ 74: 42-47).

ಐದು ಹೊತ್ತಿನ ನಮಾಝ್‌ನಲ್ಲಿ ಆಸಕ್ತಿ, ನಿಷ್ಠೆಯಿಲ್ಲದವರಿಗೆ ಮರಣಾ ನಂತರ ಜೀವನದಲ್ಲಿ ನರಕಾಗ್ನಿಯ ಶಿಕ್ಷೆ ಖಚಿತವೆಂದು ಮೇಲಿನ ದಿವ್ಯ ವಚನಗಳು ನೆನಪಿಸುತ್ತವೆ. ಇಪ್ಪತ್ತನಾಲ್ಕು ತಾಸುಗಳ ದೈನಂದಿನ ಜೀವನದಲ್ಲಿ ಮೂರ್‍ನಾಲ್ಕು ಬಾರಿ ಆಹಾರ ಸೇವಿಸಲು ತಗಲುವ ಸಮಯದಷ್ಟು ಸಹ ಐದು ಹೊತ್ತಿನ ನಮಾಝ್‌ಗೆ ತಗಲುವುದಿಲ್ಲ. ಆಹಾರವು ಶರೀರಕ್ಕೆ ಮಾತ್ರವೇ ಪೋಷಣೆ ನೀಡಬಲ್ಲುದು. ಆ ಶರೀರ ಎಷ್ಟು ಕಾಲದ ವರೆಗೆ ಈ ಲೋಕದಲ್ಲಿ ಉಳಿಯುತ್ತದೆ ಎಂಬುದಕ್ಕೆ ಯಾವ ಗ್ಯಾರಂಟಿಯೂ ಇಲ್ಲ. ಆದರೂ ನಮ್ಮ ಮಕ್ಕಳು ಆಹಾರದ ಹೊರತಾಗಿ ಜಿಮ್ ಹಾಗೂ ಸ್ವಿಮ್‌ಗಳಿಗೆ ಹೋಗಿ ಅಗತ್ಯಕ್ಕಿಂತ ಹೆಚ್ಚು ದೇಹದ ಪೋಷಣೆ ಮಾಡುತ್ತಾರೆ. ಆದರೆ ನಮಾಝ್ ಎಂಬುದು ಆತ್ಮದ ಪೋಷಣೆಯಾಗಿದೆ. ನಾವು ಅನುಭವಿಸುತ್ತಿರುವ ಶರೀರದ ಆರೋಗ್ಯ ಸಹಿತ ಎಲ್ಲಾ ರೀತಿಯ ಅನುಗ್ರಹಗಳಿಗಾಗಿ ಆ ಅನುಗ್ರಹಗಳನ್ನು ದಯಪಾಲಿಸಿದ ಅಲ್ಲಾಹನಿಗೆ ಸಮರ್ಪಿಸುವ ಕೃತಜ್ಞತೆಯಾಗಿದೆ ನಮಾಝ್. ಆತ್ಮವನ್ನು ಕಡೆಗಣಿಸಿ ಶರೀರದ ವಿಷಯವನ್ನು ಮಾತ್ರ ಗಮನಿಸಿದರೆ ಯಥಾರ್ಥ ವಿಜಯವನ್ನು ಸಾಧಿಸಲು ಸಾಧ್ಯವಿಲ್ಲ. ನಮಗೆ ಮಾನಸಿಕ ಹಾಗೂ ಶಾರೀರಿಕ ವಿಶುದ್ಧಿಯನ್ನು ಗಳಿಸಿ ಕೊಡುವುದು ಆತ್ಮದ ಶುದ್ಧೀಕರಣವಾಗಿದೆ. ಆತ್ಮಶುದ್ಧೀಕರಣಕ್ಕೆ ನಮಾಝ್‌ನಲ್ಲಿ ನಮಗಿರುವ ಆಸಕ್ತಿ ಮತ್ತು ನಿಷ್ಠೆ ಕಡ್ಡಾಯವಾಗಿದೆ. ಈ ಕುರಿತಾದ ಕುರ್‌ಆನ್ ವಚನಗಳನ್ನು ನೋಡಿರಿ:

"ದೇವಭಯದೊಂದಿಗೆ ನಮಾಝ್ ನಿರ್ವಹಿಸುವ ಸತ್ಯವಿಶ್ವಾಸಿಗಳು ಖಂಡಿತವಾಗಿಯೂ ವಿಜಯಿಗಳಾದರು" (ಕುರ್‌ಆನ್ 23:1, 2).

"ತಮ್ಮ ನಮಾಝ್‌ಗಳ ಬಗ್ಗೆ ಶ್ರದ್ಧೆಯುಳ್ಳವರೇ (ಸ್ವರ್ಗದ) ವಾರೀಸುದಾರರು" (ಕುರ್‌ಆನ್ 23: 9, 10).

ಭಕ್ತಿ ಹಾಗೂ ನಿಷ್ಠೆಯಿಂದ ಕ್ಲಪ್ತ ಸಮಯಕ್ಕೆ ನಮಾಝ್ ನಿರ್ವಹಿಸಿರಿ. "ನಿಶ್ಚಯವಾಗಿಯೂ ನಮಾಝ್ ನೀಚ ಕೃತ್ಯಗಳಿಂದಲೂ




ನಿಷಿದ್ಧವಾದವುಗಳಿಂದಲೂ ತಡೆಯುತ್ತದೆ. ಮತ್ತು ಅಲ್ಲಾಹನನ್ನು ಸ್ಮರಿಸುವುದು ಅತಿ ದೊಡ್ಡ ವಿಷಯವೇ. ನೀವು ಮಾಡುತ್ತಿರುವುದನ್ನು ಅಲ್ಲಾಹನು ಬಲ್ಲನು. (ಕುರ್‌ಆನ್ 29:45).

"ನಿಶ್ಚಯವಾಗಿಯೂ ಮಾನವನು ತವಕವಿರುವವನಾಗಿ ಸೃಷ್ಟಿಸಲ್ಪಟ್ಟಿದ್ದಾನೆ. ಅಂದರೆ ತನಗೆ ಹಾನಿ ತಟ್ಟಿದರೆ ತಾಳ್ಮೆಗೆಟ್ಟವನಾಗಿ, ಮತ್ತು ಅವನಿಗೆ ಒಳಿತಾದರೆ ತಡೆದಿಡುವವನಾಗಿ. ಆದರೆ ನಮಾಝ್ ಮಾಡುವವರ ವಿಷಯ ಬೇರೆಯೇ. ಅವರು ತಮ್ಮ ನಮಾಝ್‌ನಲ್ಲಿ ಸದಾ ನಿಷ್ಠೆಯುಳ್ಳವರಾಗಿದ್ದಾರೆ ಮತ್ತು ಅವರ ಸಂಪತ್ತುಗಳಲ್ಲಿ ಯಾಚಿಸುವವನಿಗೂ (ಜೀವನ ಮಾರ್ಗ) ತಡೆಯಲ್ಪಟ್ಟವನಿಗೂ ಒಂದು ನಿಶ್ಚಿತ ಪಾಲಿದೆ. ಅವರು ಪ್ರತಿಫಲದ ದಿನವನ್ನು ಸತ್ಯಗೊಳಿಸುವವರೂ ತಮ್ಮ ಪ್ರಭುವಿನ ಶಿಕ್ಷೆಯ ಕುರಿತು ಭಯ ಪಡುವವರೂ ಆಗಿದ್ದಾರೆ" (ಕುರ್‌ಆನ್ 70:19-27)

"ತನ್ನನ್ನು ಸಂಸ್ಕರಿಸಿಕೊಂಡವನು, ತನ್ನ ಪ್ರಭುವಿನ ನಾಮವನ್ನು ಸ್ಮರಿಸಿದವನು ಮತ್ತು ನಮಾಝ್ ಮಾಡಿದವನು ನಿಜವಾಗಿಯೂ ಯಶಸ್ವಿಯಾದನು. (ಕುರ್‌ಆನ್ 87:14, 15). "ಅವರ (ಪ್ರವಾದಿಗಳ) ಅನಂತರ(ಆ) ಸ್ಥಾನಕ್ಕೆ ಬಂದ ಉತ್ತರಾಧಿಕಾರಿಗಳು, ನಮಾಝನ್ನು ತೊರೆದರು ಮತ್ತು ಸ್ವೇಚ್ಛೆಯನ್ನು ಅನುಸರಿಸಿದರು. ಆದುದರಿಂದ ಅವರು ಸದ್ಯದಲ್ಲೇ ದುರ್ಮಾರ್ಗ(ದ ಫಲ)ವನ್ನು ಕಾಣಲಿರುವರು" (ಕುರ್‌ಆನ್ 19:59). "ನಿಶ್ಚಯವಾಗಿಯೂ ನಮಾಝ್ ಸತ್ಯವಿಶ್ವಾಸಿಗಳ ಮೇಲೆ ಸಮಯ ನಿಶ್ಚಯಿಸಲ್ಪಟ್ಟ ಒಂದು ಕಡ್ಡಾಯ ನಿಯಮವಾಗಿದೆ" (ಕುರ್‌ಆನ್ 4:103).

"ಮತ್ತು ನೀವು ನಮಾಝ್ ನೆಲೆಗೊಳಿಸಿರಿ, ಝಕಾತ್ ಕೊಡಿರಿ ಮತ್ತು ನೀವು ನಿಮಗಾಗಿ ಯಾವುದೇ ಒಳಿತನ್ನು ಮುಂಚಿತವಾಗಿ ಮಾಡಿಡುವುದಾದರೂ ಅದೆಲ್ಲವನ್ನೂ ನೀವು ಅಲ್ಲಾಹನ ಬಳಿ ಕಾಣಲಿದ್ದೀರಿ" (ಕುರ್‌ಆನ್ 2:110).

ಮೇಲೆ ಪ್ರಸ್ತಾಪಿಸಿದ ಕುರ್‌ಆನ್ ವಚನಗಳ ಹೊರತಾಗಿ ಕೆಲವು ಪ್ರವಾದಿ ವಚನಗಳಲ್ಲೂ ನಮಾಝ್‌ನ ಕುರಿತು ಕಟ್ಟು ನಿಟ್ಟಿನ ಆದೇಶವಿದೆ. ಪ್ರವಾದಿ(ಸ)ರು ಹೇಳಿದರು: "ಒಬ್ಬ ವ್ಯಕ್ತಿ ಮತ್ತು ಸತ್ಯನಿಷೇಧದ ನಡುವಿನ ಅಂತರ ನಮಾಝನ್ನು ತೊರೆಯುವುದಾಗಿದೆ" (ಮುಸ್ಲಿಮ್).

"ನಮಾಝನ್ನು ತೊರೆಯುವವನು ಮೇಲಿನ ಪ್ರವಾದಿ ವಚನದ ಪ್ರಕಾರ ಮುಸ್ಲಿಮ್ ಸಮಾಜದ ಸದಸ್ಯನೆಂದು ಹೇಳಲು ಸಹ ಅರ್ಹನಲ್ಲವೆಂಬುದು ಸ್ಪಷ್ಟ. ಪ್ರವಾದಿ(ಸ)ರು ಮರಣಾಸನ್ನ ವೇಳೆಯಲ್ಲೂ ನಮಾಝ್‌ನ ಕುರಿತಾಗಿ ತನ್ನ ಸಮುದಾಯಕ್ಕೆ ಉಪದೇಶಿಸಿದ್ದರು. ಮರಣಾ ನಂತರ ಪರಲೋಕದ ವಿಚಾರಣೆಯ ಸಂದರ್ಭದಲ್ಲಿ ಪ್ರಥಮವಾಗಿ ಪ್ರಶ್ನಿಸುವುದು ನಮಾಝ್‌ನ ಕುರಿತಾಗಿರಬಹುದೆಂದು ಪ್ರವಾದಿ(ಸ)ರ ಹದೀಸ್‌ಗಳಲ್ಲಿ ಕಾಣಬಹುದಾಗಿದೆ. ಮೇಲೆ ಉಲ್ಲೇಖಿಸಿದ ಕುರ್‌ಆನ್ ಸೂಕ್ತಗಳಿಂದ ಮತ್ತು ಪ್ರವಾದಿ ವಚನಗಳಿಂದ ಬಹಳ ಸುಲಭವಾಗಿ ನಮಗೆ ತಿಳಿಯಲು ಸಾಧ್ಯವಾಗುವ ವಿಷಯಗಳನ್ನು ಈ ಕೆಳಗಿನಂತೆ ಸಂಗ್ರಹಿಸಬಹುದಾಗಿದೆ.

1. ನಮಾಝನ್ನು ತೊರೆದರೆ ನರಕ ಪ್ರವೇಶ ಖಚಿತ. 2. ನಮಾಝನ್ನು ತೊರೆಯುವವರಿಗೆ ಸೃಷ್ಟಿಕರ್ತನ ಕುರಿತು ಮತ್ತು ಅವನು ದಯಪಾಲಿಸಿದ ಅನುಗ್ರಹಗಳ ಕುರಿತು ಬೋಧವಾಗಲಿ ಕೃತಜ್ಞತಾ ಭಾವವಾಗಲಿ ಇರುವುದಿಲ್ಲ. 3. ನಮಾಝನ್ನು ತೊರೆಯುವವರು ಎಲ್ಲಾ ರೀತಿಯ ದುರಾಚಾರ, ಧರ್ಮಬಾಹಿರ ಕೃತ್ಯಗಳಲ್ಲಿ ಭಾಗಿಯಾಗುವ ಸಾಧ್ಯತೆ ಹೆಚ್ಚಿದೆ. 4. ಭಯಭಕ್ತಿ ಮತ್ತು ಕರ್ತವ್ಯನಿಷ್ಠೆಯಿಂದ ನಮಾಝ್ ನೆಲೆಗೊಳಿಸುವವರಿಗೆ ಮನಸ್ಸಿನ ಅಸ್ವಸ್ಥತೆಗಳನ್ನು ಕಡಿಮೆಗೊಳಿಸಲಿಕ್ಕೂ ಸ್ವೇಚ್ಛೆಗಳನ್ನು ನಿಯಂತ್ರಿಸಲಿಕ್ಕೂ ಸಾಧ್ಯವಾಗುತ್ತದೆ. 6. ವಾರಕ್ಕೊಮ್ಮೆ ಅಥವಾ ಯಾವುದಾದರೂ ವಿಶೇಷ ದಿನಗಳಲ್ಲಿ ನಮಾಝ್ ನಿರ್ವಹಿಸಿದರೆ ಸಾಲದು, ದಿನನಿತ್ಯ ಐದು ಹೊತ್ತು ಕ್ಲಪ್ತ ಸಮಯಕ್ಕೆ ನಿರ್ವಹಿಸಬೇಕು. 7. ಭಯಭಕ್ತಿಯಿಂದ ಮತ್ತು ಕರ್ತವ್ಯ ನಿಷ್ಠೆಯಿಂದ ನಮಾಝ್ ನಿರ್ವಹಿಸುವವರು ಮನಃಪೂರ್ವಕ ಅಪರಾಧವೆಸಗಲಾರರು. 8. ಬುದ್ಧಿ ಸ್ಥಿಮಿತದಲ್ಲಿರುವ ವರೆಗೆ ಮರಣದ ತನಕ ನೆಲೆಗೊಳಿಸಬೇಕಾದ ಒಂದು ಆರಾಧನಾ ಕರ್ಮವಾಗಿದೆ ನಮಾಝ್. ಪ್ರಯಾಣಿಕರಿಗೂ ರೋಗಿಗಳಿಗೂ ಅದರ ನಿರ್ವಹಣಾ ರೀತಿಯಲ್ಲಿ ಕೆಲವು ವಿನಾಯಿತಿಗಳಿವೆ. ಉದಾಸೀನ ಅಥವಾ ನಿರ್ಲಕ್ಷ್ಯತೆ ತೋರಿಸಿ ಇತರ ವಿಷಯಗಳಲ್ಲಿ ಹೆಚ್ಚು ಗಮನ ಹರಿಸಿ ರಕ್ಷಣೆ ಹೊಂದಬಹುದೆಂಬ ಭಾವನೆ ವ್ಯರ್ಥ. 10. ನಮಾಝ್ ನಿರ್ವಹಿಸದ ಮುಸ್ಲಿಮ್ ನಾಮಧಾರಿಗೆ ಮುಸ್ಲಿಮ್ ಸಮಾಜದ ಸದಸ್ಯನೆಂದು ಹೇಳಲು ಅರ್ಹತೆಯಿಲ್ಲ.

ಆದ್ದರಿಂದ ಆತ್ಮೀಯ ಸಹೋದರ, ಸಹೋದರಿಯರೇ, ದಿನನಿತ್ಯ ಐದು ಹೊತ್ತು ಕ್ಲಪ್ತ ಸಮಯಕ್ಕೆ ನಮಾಝ್ ನಿರ್ವಹಿಸಿರಿ. ಮರಣದ ತನಕ ನಮಾಝ್ ನೆಲೆಗೊಳಿಸಿರಿ. ಇತರರು ನಿಮಗಾಗಿ ನಮಾಝ್ ನಿರ್ವಹಿಸುವ ಮೊದಲು ನೀವು ನಿಮಗಾಗಿ ನಮಾಝ್ ನಿರ್ವಹಿಸಿರಿ. ಮಸೀದಿಯಲ್ಲಿ ಜಮಾಅತ್ ನಮಾಝ್ ನಡೆಯುವಾಗ ಅದರಲ್ಲಿ ಭಾಗವಹಿಸಿರಿ. ನಮಾಝ್ ನಿರ್ವಹಿಸಲು ಮನೆಮಂದಿಯನ್ನೂ ತರಬೇತುಗೊಳಿಸಿರಿ. ಕಾಲಿನ ಹರಡುಗಂಟುಗಳಿಗಿಂತ ಮೇಲಕ್ಕೆ ಪ್ಯಾಂಟ್ ಅಥವಾ ಉಡುವ ಬಟ್ಟೆ ಧರಿಸಿರಿ. ಮನುಷ್ಯರ, ಪ್ರಾಣಿಗಳ ಚಿತ್ರಗಳಿರುವ ಟೀಶರ್ಟ್ ಧರಿಸದಿರಿ. ಪ್ರಾರ್ಥನೆ, ಸಹಾಯಾರ್ಥನೆ, ಹರಕೆ, ಆಣೆ ಹಾಕುವುದೆಲ್ಲವೂ ಅಲ್ಲಾಹನ ಹೆಸರಲ್ಲಿ ಮಾತ್ರ ನಿರ್ವಹಿಸಿರಿ. ಅಲ್ಲಾಹು ಅನುಗ್ರಹಿಸಲಿ. ●

# ಸ್ವರ್ಗ ಯಾತ್ರೆಗೊಂದು ದಾರಿದೀಪ

✍ ಪ್ರೊ ಪಿ. ಅಬ್ದುಲ್ಲ.
ಕನ್ನಡಕ್ಕೆ: ಇಬ್‌ನು ಮೊಹಿದ್ದೀನ್

## ಪ್ರಾಕೃತಿಕ ಅದ್ಭುತಗಳು

### ಗಾಳಿ, ಸಿಡಿಲು, ಚಂದ್ರದರ್ಶನ:

**ಗಾಳಿ:**

قَالَ رَسُولُ الله ﷺ (الرِّيحُ مِنْ رَوْحِ الله تَأْتِي بِالرَّحْمَةِ، وَتَأْتِي بِالعَذَابِ فَإِذَا رَأَيْتُمُوهَا فَلا تَسُبُّوهَا، وَاسْأَلُوا الله خَيْرَهَا، واسْتَعِيذُوا بِالله من شَرِّهَا) (أبوداود وابن ماجه وأحمد)

ರಸೂಲ್(ಸ)ರು ಹೇಳಿದರು: "ಗಾಳಿಯು ಅಲ್ಲಾಹನ ವತಿಯ ನೆಮ್ಮದಿಯಲ್ಲಿ ಒಳಗೊಂಡದ್ದಾಗಿದೆ. ಅದು ಕಾರುಣ್ಯವನ್ನು ತರುತ್ತದೆ. ಶಿಕ್ಷೆಯನ್ನು ತರುತ್ತದೆ. ನೀವು ಅದನ್ನು ಕಾಣುವಾಗ ಅದನ್ನು ಬೈಯ್ಯಬಾರದು (ಶಪಿಸಬಾರದು). ಅದರಿಂದ ಒಳಿತಿಗಾಗಿ ಅಲ್ಲಾಹನೊಡನೆ ಬೇಡಬೇಕು ಮತ್ತು ಅದರ ಕೇಡಿನಿಂದ ಅಲ್ಲಾಹನೊಡನೆ ರಕ್ಷಣೆ ಬೇಡಬೇಕು. (ಅಬೂದಾವೂದ್, ಇಬ್‌ನುಮಾಜ, ಅಹ್ಮದ್)

كَانَ النَّبِي ﷺ إِذَا عَصَفَتِ الرِّيحُ قَالَ: (اللَّهُمَّ إِنِّي أَسْأَلُكَ خَيْرَهَا، وَخَيْرَ مَا فِيهَا، وَخَيْرَ مَا أُرْسِلَتْ بِهِ، وَأَعوذُ بِكَ مِنْ شَرِّهَا وَشَرِّ مَا فِيهَا وَشَرِّ مَا أُرْسِلَتْ بِهِ) (مسلم)

ಗಾಳಿ ಬೀಸುವಾಗ ಪ್ರವಾದಿ(ಸ)ರು ಹೀಗೆ ಹೇಳುತ್ತಿದ್ದರು: "ಓ ಅಲ್ಲಾಹ್, ಅದರ ಒಳಿತನ್ನು, ಅದರಲ್ಲಿರುವುದರ ಒಳಿತನ್ನು ಮತ್ತು ಅದರ ಮೂಲಕ ಕಳುಹಿಸಲ್ಪಟ್ಟಿರುವುದರ ಒಳಿತನ್ನು ನಿನ್ನೊಡನೆ ನಾನು ಬೇಡುತ್ತೇನೆ ಮತ್ತು ಅದರ ಕೇಡಿನಿಂದ, ಅದರಲ್ಲಿರುವ ಕೇಡಿನಿಂದ ಮತ್ತು ಅದರ ಮೂಲಕ ಕಳುಹಿಸಲ್ಪಟ್ಟಿರುವುದರ ಕೇಡಿನಿಂದ ನಾನು ನಿನ್ನೊಡನೆ ರಕ್ಷಣೆ ಕೋರುತ್ತೇನೆ. (ಮುಸ್ಲಿಮ್)

كَانَ عَبْدُ الله بْنُ الزُّبَيْرِ رَضِي الله عَنْهُمَا إِذَا سَمِعَ الرَّعْدَ تَرَكَ الحَدِيثَ وَقَالَ : (سُبْحَانَ الَّذِي يُسَبِّحُ الرَّعْدُ بِحَمْدِهِ، وَالمَلاَئِكَةُ مِنْ خِيفَتِهِ). (البخاري والبيهقي وملك)

ಅಬ್ದುಲ್ಲಾಹಿಬ್‌ನು ಝುಬೈರ್(ರ)ರವರು ಸಿಡಿಲಿನ ಶಬ್ದವನ್ನು ಕೇಳುವಾಗ ಮಾತನಾಡುವುದನ್ನು ನಿಲ್ಲಿಸಿ ಈ ರೀತಿ ಹೇಳುತ್ತಿದ್ದರು. ಅವನು (ಅಲ್ಲಾಹು) ಮಹಾ ಪರಿಶುದ್ಧನು. ಸಿಡಿಲ ಘರ್ಜನೆಯು ಅವನನ್ನು ಸ್ತುತಿಸುವುದರೊಂದಿಗೆ ಅವನನ್ನು ಪ್ರಶಂಸಿಸುತ್ತದೆ. ಅವನ ಕುರಿತಾದ ಭಯದಿಂದ ಮಲಕ್‌ಗಳೂ (ಅವನನ್ನು ಪ್ರಶಂಸಿಸುತ್ತಾರೆ)" (ಬುಖಾರಿ, ಬೈಹಕಿ, ಮಾಲಿಕ್).

كَانَ رسُول الله ﷺ إِذَا رأي الهلالَ قَالَ: (الله أَكْبَرُ، اللَّهُمَّ أَهِلَّهُ عَلَيْنَا بِالأَمْنِ وَلإيمَانِ، وَالسَّلاَمَةِ وَالإسلام، وَالتَّوفِيقِ لَما تُحِبُّ وَتَرْضَى، رَبُّنَا وَرَبُّكَ الله) (الترمذي وابن حبّان والدارمي)

ಚಂದ್ರದರ್ಶನವಾದಾಗ ರಸೂಲುಲ್ಲಾಹಿ(ಸ) ಹೀಗೆ ಹೇಳುತ್ತಿದ್ದರು: "ಅಲ್ಲಾಹು ಅತ್ಯಂತ ಮಹಾನನು. ಓ ಅಲ್ಲಾಹ್, ನೀನು ಅದನ್ನು ನಿರ್ಭಯತೆಯಲ್ಲಿ, ವಿಶ್ವಾಸದಲ್ಲಿ, ರಕ್ಷಣೆಯಲ್ಲಿ, ಶರಣಾಗತಿಯಲ್ಲಿ ಮತ್ತು ನೀನು ಇಷ್ಟಪಡುವ ಹಾಗೂ ನೀನು ತೃಪ್ತಿ ಪಡುವ ಕರ್ಮಗಳ ವಿಜಯದಲ್ಲಿ ನಮ್ಮ ಮೇಲೆ ಉದಯಿಸುವಂತೆ ಮಾಡು" (ತುರ್ಮುದಿ, ಇಬ್‌ನು ಹಿಬ್ಬಾನ್, ದಾರಿಮಿ).

# ನೀವು ಮಾಡದ್ದನ್ನು ಹೇಳಬೇಡಿರಿ

ಸತ್ಯವಿಶ್ವಾಸಿ ಸಮುದಾಯವನ್ನು ಗುರುತಿಸಲು ಹಲವು ಲಕ್ಷಣಗಳಿವೆ. ಸತ್ಯವಿಶ್ವಾಸಿಯ ವ್ಯಕ್ತಿತ್ವವು ಪರಿಶುದ್ಧ ಜೀವನದಲ್ಲಿ ಎರಕ ಹೊಯ್ಯಲ್ಪಟ್ಟಿದೆ. ಮಾತು ಎಂಬುದು ಒಬ್ಬನ ಸ್ವಭಾವ ಮತ್ತು ವ್ಯಕ್ತಿಗತ ವೈಶಿಷ್ಟ್ಯತೆಗಳನ್ನು ಗುರುತಿಸುವುದರಲ್ಲಿ ಪ್ರಮುಖವಾಗಿದೆ. ಏನು ಹೇಳುತ್ತಾನೆ ಹಾಗೂ ಏನು ಮಾಡುತ್ತಾನೆ ಎನ್ನುವುದು ವ್ಯಕ್ತಿತ್ವದ ಅಳತೆಗೋಲಾಗಿದೆ.

ಮಾತು ಮತ್ತು ಕೃತಿಗಳ ನಡುವೆ ಯವುದೇ ಸಂಬಂಧವಿಲ್ಲದೆ ಬದುಕುವ ಅನೇಕರನ್ನು ನಾವು ಸಮಾಜದ ಎಲ್ಲೆಡೆ ನೋಡಬಹುದಾಗಿದೆ. ಇದು ಸಮಕಾಲೀನ ಸಮಾಜಕ್ಕೆ ತಟ್ಟಿದ ದೊಡ್ಡ ಕಳಂಕವಾಗಿದೆ. ಸಾಮಾಜಿಕ ವ್ಯವಸ್ಥೆ ಇಲ್ಲಿಂದಲೇ ಅಧಃಪತನಗೊಳ್ಳಲಾರಂಭಿಸುತ್ತದೆ. ನಾವು ಆಡುವ ಪ್ರತಿಯೊಂದು ಮಾತನ್ನು ಕಾರ್ಯರೂಪಕ್ಕಿಳಿಸಲು ಬದ್ಧರಾಗಿರಬೇಕು. ಅನ್ಯಥಾ ಇತರರನ್ನು ವಂಚಿಸುವ ಉದ್ದೇಶವನ್ನು ಹೊಂದಿರಬಾರದು. ಮಾತು ಪಾಲಿಸದ ವ್ಯಕ್ತಿ ಒಂದೇ ಸಮಯದಲ್ಲಿ ವಾಗ್ದಾನ ಉಲ್ಲಂಘನೆ, ಮೋಸ, ವಂಚನೆ ಮೊದಲಾದ ಪಾಪಗಳನ್ನು ಮಾಡಿದವನಂತಾಗುತ್ತಾನೆ. ಮಾಡದ ಕಾರ್ಯಗಳನ್ನು ಹೇಳುವುದು ಅಲ್ಲಾಹನ ಬಳಿ ಗುರುತರವಾದ ಪಾಪವಾಗಿದೆ.

"ಓ ಸತ್ಯವಿಶ್ವಾಸಿಗಳೇ, ನೀವು ಮಾಡದ ಕಾರ್ಯಗಳನ್ನು ಹೇಳುತ್ತಿರುವಿರೇಕೆ? ಮಾಡದಿರುವುದನ್ನು ಆಡುವುದು ಅಲ್ಲಾಹನನ್ನು ಅತ್ಯಂತ ಕುಪಿತಗೊಳಿಸುವ ಕಾರ್ಯವಾಗಿದೆ" ಎಂದು ಕುರ್‌ಆನ್ ಎಚ್ಚರಿಸಿದೆ.

ವಹಿಸಿಕೊಂಡ ಜವಾಬ್ದಾರಿಯನ್ನು ನಿರ್ವಹಿಸದವರು, ಸಮಯ ನಿಷ್ಠೆ ಪಾಲಿಸದವರು, ನಿಶ್ಚಿತ ಅವಧಿಗೆ ಸಾಲ ಮರುಪಾವತಿ ಮಾಡದವರು, ಜನರ ವಿಶ್ವಾಸವನ್ನು ಶೋಷಿಸಿ ಮೋಸ ಮಾಡುವವರು. ಒಪ್ಪಂದದ ಮಾಡಿ ತದನಂತರ ಅದಕ್ಕೆ ವಿರುದ್ಧವಾಗಿ ವರ್ತಿಸುವವರು, ವಾಗ್ದಾನವನ್ನು ಉಲ್ಲಂಘಿಸುವವರು ಮುಂತಾದವರು ತುಂಬಿರುವ ಸಮಾಜವು ವಿನಾಶದ ಪಾತಾಳಕ್ಕೆ ತಲುಪುವುದರಲ್ಲಿ ಸಂದೇಹವಿಲ್ಲ. ಮುಸ್ಲಿಮನೋರ್ವನು ಈ ಎಲ್ಲಾ ದುಷ್ಕಾರ್ಯಗಳಿಂದ ದೂರವಿರಬೇಕಾಗಿದೆ. ಪ್ರವಾದಿ(ಸ) ಹೇಳಿದರು:

"ಒಬ್ಬ ಮುಸ್ಲಿಮ್ ಮತ್ತೋರ್ವ ಮುಸ್ಲಿಮನ ಸಹೋದರನಾಗಿದ್ದಾನೆ. ಅವನು ತನ್ನ ಸಹೋದರರನ್ನು ವಂಚಿಸಲಾರ, ಅವನೊಂದಿಗೆ ಸುಳ್ಳಾಡಲಾರ ಮತ್ತು ಅವನ ಬಗ್ಗೆ ಬೇಸರಪಟ್ಟುಕೊಳ್ಳಲಾರ (ತಿರ್ಮುದಿ). ಜನರಿಗೆ ಮಾತುಕೊಟ್ಟು ಮೋಸ ಮಾಡುವುದು ವಿಶ್ವಾಸ ವಂಚನೆಯಾಗಿದೆ. ಅದು ಕಪಟ ವಿಶ್ವಾಸಿಯ ಸ್ವಭಾವವಾಗಿದೆ". ಪ್ರವಾದಿ(ಸ) ಹೇಳಿದರು:

"ಕಪಟ ವಿಶ್ವಾಸಿಗಳಿಗೆ ಮೂರು ಲಕ್ಷಣಗಳಿವೆ. ಮಾತನಾಡುವಾಗ ಸುಳ್ಳಾಡುವುದು, ವಾಗ್ದಾನದ ಉಲ್ಲಂಘನೆ, ನಂಬಿದರೆ ವಂಚಿಸುವುದು." (ಬುಖಾರಿ, ಮುಸ್ಲಿಮ್)

ದೊಡ್ಡ ದೊಡ್ಡ ಕಾರ್ಯಗಳನ್ನು ಉಪದೇಶಿಸುತ್ತಿದ್ದರೂ ಸ್ವಂತ ಜೀವನದಲ್ಲಿ ಅದರ ಒಂದಂಶವನ್ನು ಕೂಡಾ ಮೈಗೂಡಿಸದ ಹಲವರನ್ನು ನಾವು ದೈನಂದಿನ ಜೀವನದಲ್ಲಿ ಕಾಣುತ್ತಿದ್ದೇವೆ. ಆದರ್ಶವನ್ನು ಹೇಳುವುದರ ಜತೆಗೆ ಅದನ್ನು ಅಳವಡಿಸಿಕೊಳ್ಳದವರನ್ನು ಇತರರು ಅನುಸರಿಸುವುದಾದರೂ ಹೇಗೆ? ವಾಕ್ಚಾತುರ್ಯವಿರುವವರಿಗೆ ಭಾಷಣ ಮಾಡುವುದೆಂದರೆ ಬಹಳ ಸುಲಭ. ಆದರೆ ಅದರ ಪ್ರಕಾರ ನಡೆಯುವುದು ಕಷ್ಟ. ಸತ್ಯವಿಶ್ವಾಸಿಗಳಿಗೆ ತಮ್ಮ ಜೀವನ ಇತರರಿಗೆ ಮಾದರಿಯಾಗಿರುವಂತೆ ಬದುಕಲು ಸಾಧ್ಯವಾಗಬೇಕು. ಪ್ರತಿಯೊಬ್ಬ ಸತ್ಯವಿಶ್ವಾಸಿ ಜೀವಂತ ಮುಸ್ಲಿಮನಾಗಬೇಕು.

✍ ಹಫೀಝು ಸ್ವಲಾಹಿಯ್ಯಾ

ಮಾತು ಪಾಲಿಸದಿದ್ದರೆ ಅದರಿಂದ ಸಮಾಜಕ್ಕಾಗುವ ಹಾನಿ ಅಪಾರವಾಗಿದೆ. ಸಮಯ ನಿಷ್ಠೆಯ ಕುರಿತು ಮಾತು ಪಾಲಿಸದಿದ್ದರೆ ಅದರಿಂದಾಗಿ ನಮ್ಮ ಅಮೂಲ್ಯವಾದ ಅದೆಷ್ಟೋ ಗಂಟೆಗಳು ವ್ಯರ್ಥವಾಗಿ ಹೊಗುತ್ತದೆ. ಕ್ಲಪ್ತ ಸಮಯಕ್ಕೆ ತಲುಪುವವರನ್ನು ಮೂರ್ಖರೆಂದು ಪರಿಗಣಿಸಲಾಗುತ್ತದೆ. ಅಂದರೆ ಸಮಯ ನಿಷ್ಠೆಯ ಬಗ್ಗೆ ನಾವು ಅಷ್ಟರ ಮಟ್ಟಿಗೆ ಅಗ್ಗವಾಗಿ ಬಿಟ್ಟಿದ್ದೇವೆ. ಉಡಾಫೆಯೇ ನಮ್ಮನ್ನು ಆಳುತ್ತಿದೆ. ಇದಕ್ಕೆ ಬದಲಾವಣೆ ಅತ್ಯಗತ್ಯ. ಸಮಯವು ಯಾರನ್ನೂ ಕಾಯುವುದಿಲ್ಲ. ಕಳೆದು ಹೋದ ಕ್ಷಣಗಳನ್ನು ಮರಳಿ ಪಡೆಯುವುದು ಅಸಾಧ್ಯ.

ಪರಸ್ಪರರ ನಡುವಿನ ವ್ಯವಹಾರ ಸಾಮಾಜಿಕ ಜೀವನದಲ್ಲಿ ಅನಿವಾರ್ಯ. ಅದಿಲ್ಲದೆ ಬದುಕು ಅಸಾಧ್ಯ. ಜನರು ನಿರ್ದಿಷ್ಟ ಸಮಯವನ್ನು ನಿಶ್ಚಯಿಸಿ ಸಹಾಯವನ್ನು ಪಡೆಯುತ್ತಲೂ ಇತರರಿಗೆ ಮಾಡುತ್ತಲೂ ಇರುತ್ತಾರೆ. ಅವಧಿಯ ಮೇರೆಗೆ ವ್ಯಾಪಾರ ನಡೆಸುತ್ತಾರೆ. ಸಾಲ ಪಡೆಯುತ್ತಾರೆ. ಮರು ಸಂದಾಯ ಮಾಡುತ್ತಾರೆ. ಇಲ್ಲಿ ಪರಸ್ಪರರ ನಡುವಿನ ವಿಶ್ವಾಸವನ್ನೇ ಅಡವಿಡಲಾಗುತ್ತದೆ. ಇಲ್ಲಿ ಹಣ, ವಸ್ತು, ಒಡವೆಗಳೆಲ್ಲವೂ ಇದರ ಮೇಲೆಯೇ ಹಸ್ತಾಂತರವಾಗುತ್ತದೆ. ಅದು ಯಾವತ್ತೂ ಉಲ್ಲಂಘಿಸಲ್ಪಡಬಾರದು. ನಿಗದಿ ಪಡಿಸಿದ ಸಮಯಕ್ಕೆ ಸರಿಯಾಗಿ ವಸ್ತುಗಳನ್ನು ಸಂಬಂಧಪಟ್ಟವರಿಗೆ ತಲುಪಿಸಬೇಕು. ಸಾಲ ಕೊಟ್ಟವನು ಪಡೆದವನ ಬೆನ್ನು ಹತ್ತಿ ತಿರುಗಾಡುವಂತಾಗಬಾರದು. ಆಕಸ್ಮಿಕವಾಗಿ ಬಂದೆರಗುವ ಮರಣಕ್ಕಿಂತ ಮೊದಲು ಸಾಲ ಸಂದಾಯ ಮಾಡದಿದ್ದರೆ ಅದು ಗುರುತರ ಪಾಪವಾಗಿರುತ್ತದೆ. ಆದುದರಿಂದಲೇ ಇಸ್ಲಾಮ್ ಸಾಲದ ವ್ಯವಹಾರ ಮಾಡುವಾಗ ಸಾಕ್ಷಿ ಹಾಗೂ ಲಿಖಿತ ದಾಖಲೆ ಅಗತ್ಯವೆಂದು ಸೂಚಿಸಿದೆ. ಪರಸ್ಪರ ವಿಶ್ವಾಸದ ಹೆಸರಲ್ಲಿ ಒಪ್ಪಿಸಲಾದ ವಸ್ತುವನ್ನು ಕಬಳಿಸುವುದು ನರಕಾಗ್ನಿಯ ಭೋಜನಕ್ಕೆ ಸಮಾನವಾಗಿದೆ. (8ನೇ ಪುಟಕ್ಕೆ)

# ವಲೀದ್‌ನ ಹೃದಯದಲ್ಲಿ ಮೊಳಕೆಯೊಡೆಯದ ತೌಹೀದಿನ ಬೀಜ!

✍ ಅಶ್ರಫಲಿ, ನಡುಪದವು

ಖಾಲಿದ್(ರ)ರವರ ತಂದೆ ವಲೀದುಬ್ನುಲ್ ಮುಗೀರ ಮಕ್ಕಾದ ಪ್ರಮುಖ ಮತ್ತು ಧನಿಕನಾಗಿದ್ದನು. ಮಾತ್ರವಲ್ಲ, ಆ ನಾಡಿನ ಎಲ್ಲರಿಗೂ ಗೌರವಾದರಣೀಯನು. ಜನರು ಆತನನ್ನು ಎಷ್ಟು ಗೌರವಿಸುತ್ತಿದ್ದರೆಂದರೆ ಮಕ್ಕಾದಲ್ಲಿ ಒಬ್ಬರು ಪ್ರವಾದಿಯಾಗಿ ನಿಯುಕ್ತರಾಗುವುದಾದರೆ ಅದಕ್ಕೆ ಅರ್ಹತೆಯುಳ್ಳ ವ್ಯಕ್ತಿ ವಲೀದ್ ಮಾತ್ರವೆಂದು ಭಾವಿಸಿದ್ದರು. ಅವನನ್ನು ಬಿಟ್ಟರೆ ತಾಯಿಫ್‌ನ ಉರ್ವತುಬ್‌ನು ಮಸ್‌ಊದ್ ಪ್ರವಾದಿತ್ವಕ್ಕೆ ಅರ್ಹ ವ್ಯಕ್ತಿ ಎಂದಾಗಿತ್ತು ಅವರ ಅಭಿಪ್ರಾಯ.

ವಿಶಾಲವಾದ ತೋಟಗಳು, ಸಮೃದ್ಧವಾದ ಜಾನುವಾರುಗಳು, ಬೇಕಾದಷ್ಟು ಗುಲಾಮರು ಎಲ್ಲವೂ ಇದ್ದ ಧನಿಕರಾಗಿದ್ದರು ಅವರಿಬ್ಬರು. ಅವರ ಮುಂದೆ ಏನೂ ಅಲ್ಲದ ದರಿದ್ರನೂ ನಿಸ್ಸಾರನೂ ಆದ ಮುಹಮ್ಮದ್‌ನನ್ನು ಪ್ರವಾದಿಯಾಗಿ ಅಂಗೀಕರಿಸಬೇಕೇ? ಎಂದಿಗೂ ಸಾಧ್ಯವಿಲ್ಲ ಎಂದು ಕುರೈಶಿಗಳು ಸಾರಾಸಗಟಾಗಿ ತಿರಸ್ಕರಿಸಿದರು.

ಯಾರು ಪ್ರವಾದಿಯಾಗಬೇಕು, ಯಾರಿಗೆ ಪ್ರವಾದಿತ್ವ ನೀಡಬೇಕು ಎಂದು ತೀರ್ಮಾನಿಸುವವರು ಕುರೈಶಿಗಳಲ್ಲ. ಅದು ಅಲ್ಲಾಹನಿಗೆ ಮಾತ್ರವಿರುವ ಅಧಿಕಾರವಾಗಿದೆ. ಅಲ್ಲಾಹು ಹೇಳುತ್ತಾನೆ: ನಿನ್ನ ಪ್ರಭುವಿನ ಅನುಗ್ರಹಗಳನ್ನು ಪಾಲುಗಟ್ಟುವವರು ಇವರೇ? ಅವರ ಲೌಕಿಕ ಜೀವನದ ಸಾಧನಗಳನ್ನು ನಾವು ಅವರ ನಡುವೆ, ಪಾಲುಗಟ್ಟಿದ್ದೇವೆ ಮತ್ತು ಅವರಲ್ಲಿ ಕೆಲವರನ್ನು ಪದವಿಯಲ್ಲಿ ಕೆಲವರಿಗಿಂತ ಉನ್ನತಿಗೇರಿಸಿದ್ದೇವೆ. ಹಾಗಾಗಿ ಅವರಲ್ಲಿ ಕೆಲವರು ಅನ್ಯರನ್ನು ಅಪಹಾಸ್ಯ ಮಾಡುವವರಾಗಿ ಬಿಟ್ಟಿದ್ದಾರೆ. ನಿನ್ನ ಪ್ರಭುವಿನ ಬಳಿಯಿರುವ ಅನುಗ್ರಹಗಳು ಅವರು ಕೂಡಿಟ್ಟ ಸಂಪತ್ತಿಗಿಂತ ಉತ್ತಮವಾಗಿದೆ." (ಕುರ್‌ಆನ್)

ತನ್ನ ಊರಿನವರಿಗೆ ತನ್ನ ಮೇಲೆ ಅಪಾರ ಗೌರವವಿದೆಯೆಂಬುದು ವಲೀದ್‌ಗೆ ತಿಳಿದಿತ್ತು. ಜನರ ಅಭಿಪ್ರಾಯ ಸರಿಯಾದುದೆ. ದೇವನ ಸಂದೇಶ ಲಭಿಸಲು ಅರ್ಹ ವ್ಯಕ್ತಿ ನಾನೆ. ಉಳಿದವರೆಲ್ಲಾ ತನಗಿಂತ ಕೆಳ ಮಟ್ಟದವರು. ವಲೀದ್‌ನ ತಲೆಯ ಭಾರ ಹೆಚ್ಚಾಗತೊಡಗಿತು.

ಮುಹಮ್ಮದನ ವಚನಗಳನ್ನು ಒಮ್ಮೆ ಆಲಿಸಲೇಬೇಕು. ಅವನ ಮಾತುಗಳ ಉದ್ಭವದ ಕುರಿತು ತಿಳಿಯಬೇಕು. ಅವನ ವಂಚನೆಯನ್ನು ಬಯಲಿಗೆಳೆಯಬೇಕು. ಅದಕ್ಕಾಗಿ ಮುಹಮ್ಮದ್‌ನ ಬಳಿ ಹೋಗಿ ಅವನ ಮಾತುಗಳನ್ನು ಖುದ್ದಾಗಿ ಆಲಿಸುವುದೇ ಒಳ್ಳೆಯದೆಂದು ವಲೀದ್ ತೀರ್ಮಾನಿಸುತ್ತಾನೆ.

ಇತ್ತ ಪ್ರವಾದಿ(ಸ)ರು ವಲೀದ್‌ನ ಕುರಿತು ನಿರೀಕ್ಷೆಯಲ್ಲಿದ್ದರು. ಆತ ಇಸ್ಲಾಮ್ ಸ್ವೀಕರಿಸಿ ತನ್ನೊಂದಿಗಿರುತ್ತಿದ್ದರೆ ಅದು ಮಕ್ಕಾ ನಿವಾಸಿಗಳಲ್ಲಿ ಭಾರೀ ಪರಿಣಾಮ ಬೀರುತ್ತಿತ್ತು. ಅವರು ವಲೀದ್‌ನ ಆರಾಧಕರಲ್ಲವೇ?

ಒಂದು ದಿನ ವಲೀದ್ ನೇರವಾಗಿ ಬಂದು ಪ್ರವಾದಿ(ಸ)ರನ್ನು ಭೇಟಿಯಾದ. ವಲೀದ್‌ನನ್ನು ತನ್ನ ಬಳಿ ಕುಳ್ಳಿರಿಸಿ ಪ್ರವಾದಿ(ಸ)ರು ಕುರ್‌ಆನಿನ ವಚನಗಳನ್ನು ಸುಂದರವಾಗಿ ಓದಿ ಕೇಳಿಸಿದರು. ವಲೀದ್ ಗಮನವಿಟ್ಟು ಆಲಿಸಿದ. ಆ ದೇವ ವಚನಗಳು ವಲೀದ್‌ನ ಹೃದಯಾಂತರಾಳಕ್ಕೆ ಇಳಿಯಿತು.

ವಲೀದ್ ಆಶ್ಚರ್ಯಚಕಿತನಾದ. ಇದೆಂತಹ ವಚನಗಳು! ಕವಿತೆಯಲ್ಲ, ಮಾಯಾಜಾಲವಲ್ಲ. ಇದರ ಉದ್ಭವ ಸ್ಥಳ ದೈವ ಸನ್ನಿಧಿಯಲ್ಲದೇ ಬೇರೇನೂ ಅಲ್ಲ. ಆತನ ಹೃದಯದ ಕಾಠಿಣ್ಯತೆ ಇಳಿಯಿತು. ಹಗೆತನ ತಿಳಿಯಾಯಿತು. ಸ್ವಲ್ಪ ಹೊತ್ತು ಮೌನಧಾರಿಯಾಗಿ ಕುಳಿತು ಯೋಚನಾಮಗ್ನನಾದ ವಲೀದ್‌ನ ಹೃದಯಕ್ಕೆ ಪ್ರವಾದಿ(ಸ)ರು ತೌಹೀದ್‌ನ ಬೀಜ ಬಿತ್ತಿದರು. ಇನ್ನು ಆ ಬೀಜವನ್ನು ವಲೀದ್ ನೀರೆರೆದು ಮೊಳಕೆ ಬರಿಸಬೇಕು.

ಮುಹಮ್ಮದ್(ಸ)ರನ್ನು ವಲೀದ್ ಭೇಟಿಯಾದ ವಿಷಯ ಕುರೈಶಿಗಳಿಗೆ ತಿಳಿಯಿತು. ಅವರು ಸ್ತಬ್ಧರಾದರು. ವಲೀದ್‌ನಂತಹವರು ಮುಹಮ್ಮದ್‌ನ ಬಲೆಯಲ್ಲಿ ಸಿಲುಕುವುದೇ? ಅವರಿಗೆ ಅದು ಊಹಿಸಲೂ ಸಾಧ್ಯವಾಗಲಿಲ್ಲ. ವಿಷಯದಿಂದ ಆತನನ್ನು ಹಿಂತಿರುಗಿಸಲು ಅಲ್ಲಿ ಯಾರಿಗೂ ಸಾಧ್ಯವಿಲ್ಲ. ವಲೀದ್‌ನ ದಾರಿಯಲ್ಲಿ ಹೋಗಲು ಬಹಳಷ್ಟು ಮಂದಿ ಸನ್ನದ್ಧರಾಗಿದ್ದಾರೆ. ಹಾಗೆಲ್ಲಾದರೂ ಆದರೆ ಮುಹಮ್ಮದನ ವಿನಾಶದಿಂದ ಜನರನ್ನು ತಡೆಯಲಾಗದು.

ಅಬೂಜಹಲ್ ಗಾಢವಾಗಿ ಚಿಂತಿಸುತ್ತಾನೆ. ಆತ ವಲೀದ್‌ನ ಬಳಿ ಹೋಗಿ ಅಭಿವಂದನೆಯನ್ನರ್ಪಿಸಿ ನಮಿಸಿ ವಿನಮ್ರನಾಗಿ ಹೇಳುತ್ತಾನೆ: "ಚಿಕ್ಕಪ್ಪಾ, ನಿಮ್ಮ ಜನರು ನಿಮಗಾಗಿ ದೊಡ್ಡ ಮೊತ್ತವನ್ನು ಸಂಗ್ರಹಿಸಲು ತೀರ್ಮಾನಿಸಿದ್ದಾರೆ".

ವಲೀದ್: ಏನದು ಮೊತ್ತ, ನನಗೇಕೆ ಅದು?

ಅಬೂಜಹಲ್: ಬೇಕು. ನೀವು ಮುಹಮ್ಮದನ ಮನೆಗೆ ಹೋಗುವುದು ಅವನಿಂದ ಏನಾದರೂ ಸಿಗಬೇಕೆಂದಾಗಿರಬಹುದು ಎಂದು ಜನರು ಭಾವಿಸಿದ್ದಾರೆ. ಅದನ್ನು ನಿಮ್ಮ ಜನರೇ ಸಂಗ್ರಹಿಸಿಕೊಟ್ಟರೆ ಮತ್ತೆ ನೀವು ಅಲ್ಲಿಗೆ ಹೋಗಬೇಕಾಗಿಲ್ಲವಲ್ಲಾ!!

ವಲೀದ್: ಏನು ನನ್ನ ಜನರು ನನ್ನ ಬಗ್ಗೆ ಹಾಗೆ ಹೇಳುತ್ತಿದ್ದಾರೆಯೇ? ನನಗೆ ಅದರ ಅಗತ್ಯವಿದೆಯೇ? ನಾನು ಅವರಿಗಿಂತ ಎಷ್ಟೋ ದೊಡ್ಡ ಶ್ರೀಮಂತ. ಹಾಗಿದ್ದರೆ ಇನ್ನು ಮುಂದೆ ನಾನು ಮುಹಮ್ಮದನ ಮನೆಗೆ ಹೋಗುವುದಿಲ್ಲ, ಸಾಕಲ್ಲವೇ?

ಅಬೂಜಹಲ್: ಅಷ್ಟು ಸಾಲದು. ತಾವು ಅವನನ್ನು ದ್ವೇಷಿಸುತ್ತೀರೆಂದು ದೃಢಪಡಿಸಲಿಕ್ಕಾಗಿ ತಾವು ಅವನ ಕುರಿತಾಗಲಿ, ಅವನ ವಚನಗಳ ಕುರಿತಾಗಲಿ ಏನಾದರೂ ಘೋಷಿಸಬೇಕು.

ವಲೀದ್: "ನಾನೇನು ಹೇಳಲಿ. ಅರಬಿ ಕವಿತೆಗಳ ಕುರಿತು ಮತ್ತು ಅದರ ಶೈಲಿಯ ಕುರಿತು ನಿಮಗಿಂತ ಹೆಚ್ಚು ತಿಳಿದವನು ನಾನೇ. ಅವು ಯಾವುದೂ ಅವನ ವಚನಗಳಿಗೆ ಸರಿಸಾಟಿಯಾಗಲಾರದು. ಅಷ್ಟು ಮಾಧುರ್ಯವುಳ್ಳ ವಚನಗಳಾಗಿವೆ ಅವನದು. ಅದು ಖಂಡಿತ ಯಶಸ್ವಿಯಾಗಲಿದೆ. ಅದನ್ನು ಪರಾಜಯಗೊಳಿಸಲು ಸಾಧ್ಯವಿಲ್ಲ".

ಅಬೂಜಹಲ್: ಸರಿಯಾಗಿರಬಹುದು. ಆದರೆ ಅದನ್ನು ತೀವ್ರವಾಗಿ ವಿರೋಧಿಸುವ ಮತ್ತು ಜನರನ್ನು ಸಮಾಧಾನಗೊಸುವ ಒಂದು ಅಭಿಪ್ರಾಯವನ್ನು ತಾವು ಹೊರಡಿಸಲೇಬೇಕು.

ವಲೀದ್: ಹಾಗಿದ್ದರೆ ಸ್ವಲ್ಪ ತಾಳು, ಯೋಚಿಸಿ ಹೇಳುತ್ತೇನೆ. ಇಬ್ಬರೂ ಯೋಚಿಸತೊಡಗಿದರು. ತನ್ನ ಹೃದಯದಲ್ಲಿ ಪ್ರಭಾವ ಬೀರಿದ ಆ ಸುಂದರ ವಚನಗಳ ಕುರಿತು ಮನಃಸ್ಸಾಕ್ಷಿಗೆ ವಿರುದ್ಧವಾಗಿ ಏನಾದರೂ ಸಿದ್ಧಪಡಿಸಬೇಕಲ್ಲಾ. ಜನರಿಗೂ ಅದು ಸ್ವೀಕಾರಾರ್ಹವಾಗಬೇಕು. ಅಂತಹ ಒಂದು ಸುಳ್ಳನ್ನು ಹೆಣೆಯಲು ವಲೀದ್ ಬಹಳಷ್ಟು ಹೆಣಗಾಡುತ್ತಾನೆ. ಕೊನೆಗೆ ಏನೋ ಹೊಳೆದವನಂತೆ ತಲೆಯೆತ್ತಿದ ವಲೀದ್ ಅಬೂಜಹಲನೊಡನೆ ಹೀಗೆ ಹೇಳುತ್ತಾನೆ: "ಅದು ದೇವ ವಚನವಾಗಲಿ, ಕವಿತೆಯಾಗಲಿ ಏನೂ ಅಲ್ಲ. ಅದು ಬರೇ ಸಿಹ್ರ್ ಅಥವಾ ಮಾಟಗಾರಿಕೆಯಾಗಿದೆ. ಮುಹಮ್ಮದ್ ಪ್ರವಾದಿಯಲ್ಲ, ಆತ ಒಬ್ಬ ಜಾದುಗಾರನಾಗಿದ್ದಾನೆಂಬುದೇ ನನ್ನ ಅಭಿಪ್ರಾಯ. ಹಾಗೆಯೇ ಪ್ರಚಾರ ಮಾಡೋಣ!

ಆನಂದ ತುಂದಿಲನಾದ ಅಬೂಜಹಲ್ ಹೊರಗಿಳಿದ. ವಲೀದ್‌ನ ಅಭಿಪ್ರಾಯವನ್ನು ಊರಿಡೀ ಹಬ್ಬಿಸಿದ. ಹೀಗೆ ವಲೀದ್‌ನ ಹೃದಯಾಂತರಾಳದಲ್ಲಿ ಬಿತ್ತಿದ ಸತ್ಯದ ಬೀಜವು ಮೊಳಕೆಯೊಡೆಯದೆ ಸಿಡಿದು ಹೋಯಿತು. "ಅವರೇಕೆ ಚಿಂತಿಸುವುದಿಲ್ಲ? ಅವರ ಸಂಗಾತಿಗೆ (ಪ್ರವಾದಿಗೆ) ಯಾವ ಮತಿ ವಿಕಲತೆಯೂ ಇಲ್ಲ. ಅವರು ಓರ್ವ ಸುಸ್ಪಷ್ಟ ಮುನ್ನೆಚ್ಚರಿಕೆ ನೀಡುವವರೇ ವಿನಾ (ಬೇರಾರೂ ಅಲ್ಲ)". (ಕುರ್‌ಆನ್ 184).

"ನೀವು ಮಾಟಬಾಧಿತ ವ್ಯಕ್ತಿಯನ್ನಲ್ಲದೆ (ಇನ್ನಾರನ್ನೂ) ಹಿಂಬಾಲಿಸುತ್ತಿಲ್ಲ ಎಂದು ಅಕ್ರಮಿಗಳು ಹೇಳುತ್ತಾರೆ." (ಕುರ್‌ಆನ್ 25:8)

# ನೀವು ಮಾಡದ್ದನ್ನು ಹೇಳಬೇಡಿರಿ

(5ನೇ ಪುಟದಿಂದ)

ಸಾಲವಾಗಿ ಪಡೆದ ಹಣವನ್ನು ನಿಗಧಿತ ಸಮಯಕ್ಕೆ ಮರು ಸಂದಾಯ ಮಾಡಲು ಅಸಾಧ್ಯವಾದ ಪರಿಸ್ಥಿತಿ ನಿರ್ಮಾಣವಾಗಬಹುದು. ಅಂತಹವರನ್ನು ಭೇಟಿಯಾಗಿ ಸಂಕಷ್ಟವನ್ನು ಅವರಿಗ ಸಂದರ್ಭದಲ್ಲಿ ಸಂಬಂಧಪಟ್ಟವರನ್ನು ಮನವರಿಕೆ ಮಾಡಿಕೊಡಬೇಕಲ್ಲದೆ ತಲೆ ಮರೆಸಿಕೊಂಡು ಓಡಾಡಬಾರದು.

ಅನೇಕ ವಿಧದ ಜವಾಬ್ದಾರಿಯನ್ನು ಹೊತ್ತುಕೊಂಡು ಕ್ರಮೇಣ ಅದನ್ನು ನಿರ್ವಹಿಸದೆ ಇತರರು ತಮ್ಮ ಮೇಲಿಟ್ಟ ನಂಬಿಕೆಗೆ ದ್ರೋಹ ಬಗೆಯುವವರಿದ್ದಾರೆ. ಇಂತಹವರು ತಾವು ಮಾಡಿಕೊಂಡ ಕರಾರುಗಳು, ಹೊತ್ತುಕೊಂಡ ಜವಾಬ್ದಾರಿಗಳಿಗೆ ಅಲ್ಲಾಹನ ನ್ಯಾಯಾಲಯದಲ್ಲಿ ಸೂಕ್ತ ಉತ್ತರ ನೀಡಬೇಕಾಗಿದೆ ಎಂಬ ಪರಮ ಸತ್ಯವನ್ನು ಮರೆಯಬಾರದು. ಪುನರುತ್ಥಾನ ದಿನದಂದು ಪ್ರವಾದಿ(ಸ)ರವರು ವಿರುದ್ಧವಾಗಿ ವಾದಿಸುವ ಮೂರು ವಿಭಾಗಗಳಲ್ಲಿ ಒಂದು ವಚನ ಭಂಗ ಮಾಡುವವರಾಗಿದ್ದಾರೆ ಎಂಬುದನ್ನು ತುಂಬಾ ಗಂಭೀರವಾಗಿ ಪರಿಗಣಿಸಬೇಕಾಗಿದೆ. ತನ್ನಿಂದ ಮಾಡಲು ಅಸಾಧ್ಯವಾದ ಕೆಲಸಗಳನ್ನು ಹೊತ್ತುಕೊಂಡು ಸಮಾಜದಲ್ಲಿ ಗೌರವಾನ್ವಿತರಾಗಿ ಮೆರೆಯಲು ಪ್ರಯತ್ನಿಸುವುದು ಸತ್ಯವಿಶ್ವಾಸಿಗೆ ಭೂಷಣವಲ್ಲ. ಬದಲಾಗಿ, ತನ್ನ ಪರಿಮಿತಿಯನ್ನು ಸಂಬಂಧಪಟ್ಟವರಿಗೆ ಮನವರಿಕೆ ಮಾಡಿಕೊಟ್ಟು, ಅದರಿಂದ ದೂರವುಳಿಯುವುದು ಒಳ್ಳೆಯದು. ಸಮಾಜದಲ್ಲಿ ಹೆಸರು ಪಡೆಯಲಿಕ್ಕಾಗಿ ದೊಡ್ಡ ದೊಡ್ಡ ಕಾರ್ಯಗಳನ್ನು ವಹಿಸಿಕೊಂಡು ಯಾವುದನ್ನೂ ಮಾಡದಿರುವುದಕ್ಕಿಂತ ವಹಿಸಿದ ಕಾರ್ಯಗಳು ಕಡಿಮೆಯಾದರೂ ಅದನ್ನು ಚೆನ್ನಾಗಿ ನಿರ್ವಹಿಸುವುದೇ ಉತ್ತಮ. •

# ಮಾತಾಪಿತರೊಂದಿಗೆ ಮಕ್ಕಳ ಬಾಧ್ಯತೆಗಳು

✍ ಮುಹಮ್ಮದ್ ರಾಯಿಫ್, ಮಂಗಳೂರು

ಮುಪ್ಪುಕಾಲದ ಅನಾರೋಗ್ಯ, ಒಂಟಿತನದಿಂದ ಬೇಸತ್ತ ಮನಸ್ಸು ಇತ್ಯಾದಿಗಳಾಗಿವೆ ವೃದ್ಧ ಜನರ ಅತೀ ದೊಡ್ಡ ಸಮಸ್ಯೆಗಳು. ಅವುಗಳಿಗೆ ಪರಿಹಾರವಾಗಿ ಒಂದಿಷ್ಟು ಆಹಾರ, ಔಷಧಿ, ಒರಗಿಕೊಳ್ಳಲು ಮತ್ತು ಮಲಗಲು ದಿಂಬುಗಳನ್ನು ಒದಗಿಸಿದರೆ ಸಾಕಾದೀತೇ? ವೃದ್ಧ ಮಾತಾಪಿತರ ಬಳಿ ಮಕ್ಕಳ ಸಾನ್ನಿಧ್ಯ, ಅವರೊಡನೆ ಮಾತುಕತೆ, ಅವರ ಸುಖದುಃಖ ವಿಚಾರಣೆ ಹಾಗೂ ಆರೈಕೆಗಳಾಗಿವೆ. ಅವರಿಗೆ ಮನಸಂತೃಪ್ತಿ ನೀಡುವ ವಿಷಯವಾಗಿ ವೃದ್ಧ ಮಾತಾಪಿತರನ್ನು ಮಕ್ಕಳು ಸಂದರ್ಭೋಚಿತವಾಗಿ ಸಂದರ್ಶಿಸಿ, ಅವರೊಡನೆ ವಿಧೇಯತೆಯಿಂದ ಮಾತನಾಡುತ್ತಾ ಇರಬೇಕು. ಅವರ ಮಾತುಗಳನ್ನು ಆಲಿಸಿ ಉತ್ತರ ನೀಡಬೇಕು. ಅವರ ಮಾತುಗಳು ಬಹಳ ಹಳೇ ರೀತಿಯದ್ದಾಗಿರಬಹುದು. ಕೇಳಿ ಕೇಳಿ ಸುಸ್ತಾದ ಹಳೇ ಕಥೆ ಗಳಾಗಿರಬಹುದು. ಆದರೆ ಅದನ್ನು ತಾಳ್ಮೆಯಿಂದಲೂ ಉತ್ಸಾಹದಿಂದಲೂ ಕಿವಿಗೊಟ್ಟು ಕೇಳುವುದೇ ವೃದ್ಧ ಮಾತಾಪಿತರ ಅತೀ ದೊಡ್ಡ ಆರೈಕೆ. ವೃದ್ಧರು ಹೇಳುವ ಹೆಚ್ಚಿನ ಮಾತುಗಳು ಅಪ್ರಾಯೋಗಿಕವೂ ಕಾಲಹರಣ ಮಾಡುವಂತಹದ್ದೂ ಆಗಿರಬಹುದು. ಆದರೂ ಅವರಿಗೆ ಅನುಕೂಲಕರವಾಗಿ ಸ್ಪಂದಿಸಬೇಕಾದುದು ಮಕ್ಕಳ ಕರ್ತವ್ಯವಾಗಿದೆ. ಅವರೊಡನೆ ತರ್ಕಿಸಬಾರದು. ತಾವು ಹೇಳುವುದನ್ನೆಲ್ಲಾ ಮಕ್ಕಳು ಅಕ್ಷರಶಃ (10ನೇ ಪುಟಕ್ಕೆ)

**ಆರೈಕೆ ಮತ್ತು ಪೀಡನೆ:** ಪುತ್ರ ಅಥವಾ ಪುತ್ರಿ ಮಾತಾಪಿತರಿಗೆ ಯಾವ ರೀತಿಯ ಆರೈಕೆ ನೀಡಿ ಸಂಸ್ಕರಿಸಬೇಕೆಂಬುದನ್ನು ಪರಿಶೀಲಿಸೋಣ. ಮಾತಾಪಿತರನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದೇವೆಂದು ಹೆಚ್ಚಿನ ಮಕ್ಕಳು ಭಾವಿಸಿದ್ದಾರೆ. ಆದರೆ ಮಾತಾಪಿತರನ್ನು ಯಾವ ರೀತಿ ಆರೈಕೆ ಮಾಡಬೇಕೆಂದು ಹೆಚ್ಚಿನವರಿಗೆ ತಿಳಿದಿರುವುದಿಲ್ಲ. ಮಾತಾಪಿತರಿಗೆ ಒಳ್ಳೆಯ ಆಹಾರ, ಅಗತ್ಯವಿರುವ ಔಷಧಿಗಳು, ಉಡುಪು, ವಾಸಕ್ಕೆ ಸೌಕರ್ಯವಿರುವ ಕೋಣೆ ಇತ್ಯಾದಿ ಒದಗಿಸಿಕೊಡುವ ಒಬ್ಬ ಮಗನ ಭಾವನೆಯೇನೆಂದರೆ ತಾನು ಮಾತಾಪಿತರನ್ನು ಬಹಳ ಚೆನ್ನಾಗಿ ಆರೈಕೆ ಮಾಡುತ್ತಿದ್ದೇನೆ ಎಂದಾಗಿದೆ. ಆದರೆ ಇವಿಷ್ಟು ಸೌಕರ್ಯಗಳನ್ನು ಒದಗಿಸಿದ ಮಾತ್ರಕ್ಕೆ ಮಾತಾಪಿತರೊಡನೆ ನಮಗಿರುವ ಬಾಧ್ಯತೆಗಳು ಮುಗಿದೀತೇ? ಖಂಡಿತವಾಗಿಯೂ ಇಲ್ಲ.

ಮಾತಾಪಿತರನ್ನು ಪ್ರತ್ಯಕ್ಷವಾಗಿ ಪೀಡಿಸದಿದ್ದರೂ ಸ್ವಭಾವದೋಷದ ಕಾರಣದಿಂದ ಆತನ ಮಾತಾಪಿತರು ಮಾನಸಿಕವಾಗಿ ಪೀಡಿಸಲ್ಪಟ್ಟರೆ ಅದಕ್ಕವನು ಅಲ್ಲಾಹನೊಡನೆ ಉತ್ತರ ಹೇಳಬೇಕಾದೀತು. ಪರಸ್ಪರ ಜಗಳದಲ್ಲಿ ತಂದೆ ತಾಯಂದಿರನ್ನು ಹೀನಾಯವಾಗಿ ಬೈಯ್ಯುವ ದುಷ್ಟ ಸಂಪ್ರದಾಯ ಕೆಲವರಲ್ಲಿದೆ. ಜಗಳಾಡುವ ವ್ಯಕ್ತಿಗಳ ತಂದೆ ತಾಯಂದಿರು ಅವರ ವಿವಾದದಲ್ಲಿ ಭಾಗಿಗಳಾಗಿರದಿದ್ದಲ್ಲಿ ಮೃತ ಮಾತಾಪಿತರನ್ನು ಪರಸ್ಪರ ಬೈದು ತಮ್ಮ ರೋಷ ತೀರಿಸಿಕೊಳ್ಳುತ್ತಾರೆ. ಕೇಳಲಾಗದಂತಹ ಪದ



ಗಳನ್ನುಪಯೋಗಿಸಿ, ಮನೆತನವನ್ನೂ ಅವಮಾನಿಸುತ್ತಾರೆ. ಸಮಾಜದ ಮುಂದಾಳುಗಳೆನಿಸಿಕೊಂಡವರೂ ಮತ ಪಂಡಿತರುಗಳೂ ಕೆಲವೊಮ್ಮೆ ತುಚ್ಛ ಮಾತುಗಳನ್ನು ಪ್ರಯೋಗಿಸಿ ಜಗಳಾಡುವುದನ್ನು ಕಾಣಬಹುದು. ಇಂತಹಾ ದುಃಸ್ವಭಾವವನ್ನು ಪ್ರವಾದಿ(ಸ)ರವರು ತೀವ್ರವಾಗಿ ವಿರೋಧಿಸಿದ್ದಾರೆ. ಅನ್ಯರ ಮಾತಾಪಿತರನ್ನು ತುಚ್ಛವಾಗಿ ಬೈದು ಅವರಿಂದ ತನ್ನ ಮಾತಾಪಿತರನ್ನು ಬೈಯ್ಯಿಸಿಲಿಕೊಳ್ಳುವವನು ತನ್ನ ಮಾತಾಪಿತರನ್ನು ತಾನೇ ಬೈಯ್ಯುವುದಕ್ಕೆ ಸಮಾನವೆಂದು ಪ್ರವಾದಿ(ಸ)ರವರು ಹೇಳಿದ್ದಾರೆ. ಅಬ್ದುಲ್ಲಾಹಿಬ್‌ನು ಉಮರ್(ರ)ರಿಂದ ವರದಿ: "ಪ್ರವಾದಿ(ಸ)ರವರು ಒಮ್ಮೆ ಹೀಗೆಂದರು, ಒಬ್ಬನು ತನ್ನ ಮಾತಾಪಿತರಲ್ಲಿ ಕೆಟ್ಟ ಮಾತುಗಳನ್ನಾಡುವುದು ಮಹಾಪರಾಧವಾಗಿದೆ. ಆಗ ಪ್ರವಾದಿ(ಸ)ರವರೊಡನೆ ಒಬ್ಬರು ಹೇಳಿದರು, ಅಲ್ಲಾಹನ ಸಂದೇಶವಾಹಕರೇ, ಸ್ವಂತ ಮಾತಾಪಿತರನ್ನು ಕೆಟ್ಟ ಮಾತುಗಳಿಂದ ಬೈಯ್ಯುವುದೆಂದರೆ ಹೇಗೆ? ಆಗ ಪ್ರವಾದಿ(ಸ)ರವರು ಹೇಳಿದರು, ಒಬ್ಬನು ಇನ್ನೊಬ್ಬನ ತಂದೆಗೆ ಬೈದಾಗ, ಅವನು ಇವನ ತಂದೆ, ತಾಯಿಗೂ ಬೈಯ್ಯುವನು. (ಬುಖಾರಿ)

**ಮಾತೆಯ ಸ್ಥಾನ ಮಹತ್ವದ್ದಾಗಿದೆ:** ಪವಿತ್ರ ಇಸ್ಲಾಮ್ ಮಾತೆಗೆ ಮಹತ್ವದ ಸ್ಥಾನ ನೀಡಿದೆ. ಮಾತಾಪಿತರಿಗೆ ಒಳಿತನ್ನು ಬಗೆಯಬೇಕೆಂದು ಉಪದೇಶಿಸಿದ ಕುರ್‌ಆನಿನ ಸೂಕ್ತವು ತಾಯಿ ಅನುಭವಿಸುವ ಕಷ್ಟಗಳನ್ನೂ ಸಹಿಸುವ ತ್ಯಾಗಗಳನ್ನೂ ವಿಷಧೀಕರಿಸಿದೆ. ಗರ್ಭ ಧರಿಸಿದ್ದು, ಮೊಲೆಯುಣಿಸಿದ್ದೆಲ್ಲವೂ ತಾಯಿಯೆಂಬುದನ್ನು ಕುರ್‌ಆನ್ ಮಕ್ಕಳಿಗೆ ನೆನಪಿಸುತ್ತದೆ. ಆದ್ದರಿಂದ ತಾಯಿಗೆ ತಂದೆಗಿಂದಲೂ ಹೆಚ್ಚು ಪರಿಗಣನೆ ನೀಡಬೇಕೆಂದು ಪ್ರವಾದಿ(ಸ)ರವರು ಹೇಳಿದ್ದಾರೆ. ಅಬೂಹುರೈರಾ(ರ)ರಿಂದ ವರದಿ: "ಒಮ್ಮೆ ಪ್ರವಾದಿ(ಸ)ರವರ ಬಳಿ ಒಬ್ಬರು ಬಂದು "ನಾನು ಅತ್ಯುತ್ತಮ ರೀತಿಯಲ್ಲಿ ವರ್ತಿಸಲು ಅರ್ಹತೆಯುಳ್ಳವರು ಯಾರೆಂದು ಕೇಳಿದರು. ಆಗ ಪ್ರವಾದಿ(ಸ)ರವರು ಹೇಳುತ್ತಾರೆ: "ನಿಮ್ಮ ತಾಯಿ" ಅವರು ಪುನಃ ಕೇಳುತ್ತಾರೆ: "ಆ ಮೇಲೆ ಯಾರು?" ಪ್ರವಾದಿ(ಸ)ರವರು ಹೇಳುತ್ತಾರೆ: "ನಿಮ್ಮ ತಾಯಿ", ಮತ್ತೂ ಕೇಳುತ್ತಾರೆ : "ನಂತರ ಯಾರು?" ಪ್ರವಾದಿ(ಸ)ರವರು ಹೇಳುತ್ತಾರೆ "ನಿಮ್ಮ ತಾಯಿ". ಆ ವ್ಯಕ್ತಿ ಮಗದೊಮ್ಮೆ ಕೇಳುತ್ತಾರೆ: ಪ್ರವಾದಿ(ಸ)ರವರು ಹೇಳುತ್ತಾರೆ: "ನಿಮ್ಮ ತಂದೆ". (ಬುಖಾರಿ)

ಇಲ್ಲಿ ತಂದೆಗಿಂತ ಮೂರುಪಟ್ಟು ಹೆಚ್ಚು ಪ್ರಾಮುಖ್ಯತೆ ನೀಡಿದ್ದು ತಾಯಿಗೆ ಎಂಬುದನ್ನು ಗಮನಿಸಬಹುದು. ತಾಯಿಗೆ ಹೆಚ್ಚು ಮಹತ್ವವಿದ್ದರೂ ತಂದೆಯನ್ನು ಅವಗಣಿಸಬಾರದೆಂಬ ವಿಷಯವನ್ನೂ ಗಮನಿಸಬೇಕಾಗಿದೆ. ತಾಯಿಯ ಪಾದದಡಿಯಲ್ಲಿ ಸ್ವರ್ಗವಿದೆಯೆಂಬ ಪ್ರವಾದಿ ವಚನವು ತಾಯಿಯನ್ನು ಗೌರವಿಸಬೇಕು ಪ್ರೀತಿಸಬೇಕು ಮತ್ತು ಪರಿಪಾಲಿಸಬೇಕು ಎಂಬುದನ್ನು ಸೂಚಿಸುತ್ತದೆ. ಆದರೆ ಮಕ್ಕಳ ದುರ್ವರ್ತನೆಯಿಂದ ಕೋಪಗೊಂಡು ಮಕ್ಕಳಿಗೆದುರಾಗಿ ತಂದೆಯಾಗಲಿ, ತಾಯಿಯಾಗಲಿ ಪ್ರಾರ್ಥಿಸಿದರೆ ಅಥವಾ ಶಪಿಸಿದರೆ ಆ ವಿಷಯದಲ್ಲಿ ತಾಯಿಗಿಂತಲೂ ಹೆಚ್ಚು ಭಯ ಪಡಬೇಕಾದದ್ದು ತಂದೆಯನ್ನಾಗಿದೆಯೆಂದು ಪ್ರವಾದಿ(ಸ)ರವರು ಸೂಚಿಸಿದ್ದಾರೆ. ಮಕ್ಕಳ ವರ್ತನೆಯಿಂದ ಅತೀ ಬೇಗನೆ ಕೋಪಿಸುವುದೂ ಶಪಿಸುವುದೂ ತಾಯಿಯಾಗಿದೆ. ಆದರೆ ಸ್ವಲ್ಪ ಹೊತ್ತಿನಲ್ಲೇ ಕೋಪ ತಣ್ಣಗಾದಾಗ ತಾಯಿಗೆ ಖೇದ ಮತ್ತು ಪಶ್ಚಾತ್ತಾಪ ಉಂಟಾಗುತ್ತದೆ. ಆದರೆ ತಂದೆಯ ಸ್ವಭಾವ ತಾಯಿಗಿಂತ ಭಿನ್ನವಾದುದು. ಮಕ್ಕಳ ವರ್ತನೆಯಿಂದ ತಂದೆಯು ಅಷ್ಟು ಬೇಗ ಕೋಪಿಸಿಕೊಳ್ಳುವುದಿಲ್ಲ. ಒಬ್ಬ ತಂದೆಯು ಮಕ್ಕಳಿಗೆ ಶಾಪ ಇಡಬೇಕಾದರೆ ಆ ಮಕ್ಕಳಿಂದ ತಂದೆಗೆ ಸಹಿಸಲಾರದ ಪೀಡನೆಯಿರಬೇಕೆಂದರ್ಥ. ತಂದೆಯ ಮನಸ್ಸಿಗೆ ಒಮ್ಮೆ ವೇದನೆಯಾದರೆ ಅದು ತಕ್ಷಣ ಬದಲಾಗುವ ಸಾಧ್ಯತೆ ಕಡಿಮೆ. ಹಾಗಾಗಿ ತಾಯಿಯ ಪ್ರಾರ್ಥನೆಗಿಂತಲೂ ಹೆಚ್ಚು ತಂದೆಯ ಪ್ರಾರ್ಥನೆಗೆ ಭಯಪಡಬೇಕೆಂದು ಪ್ರವಾದಿ(ಸ)ರವರು ಹೇಳಿದ್ದಾರೆ.

**ಅಲ್ಲಾಹನ ಸಂತೃಪ್ತಿ:** ಒಬ್ಬನ ಕುರಿತಾಗಿ ಆತನ ಮಾತಾಪಿತರು ಸಂತೃಪ್ತಿಗೊಂಡಿದ್ದರೆ ಆತನ ಕುರಿತು ಅಲ್ಲಾಹನೂ ಸಂತೃಪ್ತನಾಗಿರುತ್ತಾನೆ. ಒಬ್ಬನ ಕುರಿತು ಆತನ ಮಾತಾಪಿತರು ಅತೃಪ್ತರೂ ಕೋಪಿಷ್ಟರೂ ಆಗಿದ್ದರೆ ಆತನ ಕುರಿತು ಅಲ್ಲಾಹನು ಅತೃಪ್ತನೂ ಕೋಪಿಷ್ಟನೂ ಆಗುತ್ತಾನೆಂದು ಪ್ರವಾದಿ(ಸ)ರವರು ಎಚ್ಚರಿಸಿದ್ದಾರೆ. ಅಲ್ಲಾಹನ ತೃಪ್ತಿ ಮಾತಾಪಿತರ ತೃಪ್ತಿಯಲ್ಲೂ ಅಲ್ಲಾಹನ ಕೋಪ ಮಾತಾಪಿತರ ಕೋಪದಲ್ಲೂ ಆಗಿದೆ. (ತಿರ್ಮುದಿ)

ಮಾತಾಪಿತರನ್ನು ದ್ವೇಷಿಸುವ ಹಾಗೂ ಅವರಿಗೆ ದ್ರೋಹವೆಸಗುವವರಿಗೆ ಪರಲೋಕದಲ್ಲಿ ಶಿಕ್ಷೆ ಮಾತ್ರವಲ್ಲ, ಇಹದಲ್ಲೂ ಅಲ್ಲಾಹ್ ಅವರನ್ನು ಶಿಕ್ಷಿಸುತ್ತಾನೆಂದು ಪ್ರವಾದಿ(ಸ)ರವರು ಎಚ್ಚರಿಸಿದ್ದಾರೆ. ಅಬೂಬಕ್ಕರ್(ರ)ರಿಂದ ವರದಿ: "ಪ್ರವಾದಿ(ಸ)ರವರು ಪ್ರಸ್ತಾಪಿಸಿದ್ದಾರೆ: ಇತರೆಲ್ಲಾ ಪಾಪಗಳ ಶಿಕ್ಷೆಯನ್ನು ಅಲ್ಲಾಹು ಅಂತ್ಯ ದಿನದ ವರೆಗೆ ಮುಂದೂಡಲೂಬಹುದು, ಮಾತಾಪಿತರನ್ನು ಪೀಡಿಸುವುದರ ಹೊರತು. ಆ ಒಂದು ವಿಷಯದಲ್ಲಿ ಶಿಕ್ಷೆ ನೀಡುವ ಬಗ್ಗೆ ಅಲ್ಲಾಹು ಅವಸರ ಪಡುತ್ತಾನೆ, ಅವನ ಮರಣಕ್ಕೆ ಮೊದಲೇ ಅವನ ಜೀವಿತ ಕಾಲದಲ್ಲೇ." (ಹಾಕಿಮ್)

# ಧಾರ್ಮಿಕ ಪ್ರಶ್ನೋತ್ತರಗಳು

## ಬರಾಅತ್ ರಾತ್ರಿ

**ಪ್ರಶ್ನೆ: ಶಅ್‌ಬಾನ್ ಹದಿನೈದನೇ ಬರಾಅತ್ ರಾತ್ರಿಯಂದು ಜುಮಾ ಮಸೀದಿಯಲ್ಲಿ ಒಗ್ಗೂಡಿ ಮಗ್ರಿಬ್‌ನ ನಂತರ ಮೂರು ಯಾಸೀನ್ ಓದಿ ಪ್ರಾರ್ಥಿಸುವ ಸಂಪ್ರದಾಯ ಜಾರಿಯಲ್ಲಿದೆ. ದೀರ್ಘಾಯುಷ್ಯ, ಆಹಾರ ವೈಶಾಲ್ಯತೆ ಮತ್ತು ಈಮಾನ್ ಸಲಾಮತ್ ಹೀಗೆ ಪ್ರತ್ಯೇಕ ನಿಯ್ಯತ್ ಮಾಡಿಕೊಂಡು ಯಾಸೀನ್ ಪಠಿಸಲಾಗುತ್ತದೆ. ಈ ಸಭೆಯಲ್ಲಿ ಬಂದು ಸೇರುವವರಲ್ಲಿ ಬಹುತೇಕ ಮಂದಿ ನಮಾಝ್ ಉಪವಾಸ ಮುಂತಾದ ಆರಾಧನೆಗಳ ಬಗ್ಗೆ ತೀರಾ ಶ್ರದ್ಧೆ ಇಲ್ಲದವರಾಗುತ್ತಾರೆ. ಕೇವಲ ವರ್ಷಕ್ಕೊಮ್ಮೆ ಬರಾಅತ್ ದಿನದಂದು ಇಂತಹ ಆಚಾರ ನೆರವೇರಿಸಿದರೆ ತಮ್ಮೆಲ್ಲ ಸಮಸ್ಯೆ ನಿವಾರಣೆಗೊಂಡು ಉದ್ದೇಶ ಕೈಗೂಡಲಿದೆ ಎಂಬುದು ಅವರ ವಿಶ್ವಾಸ.**

**1. ಮೇಲಿನ ಕರ್ಮಗಳಿಗೆ ಕುರ್‌ಆನ್‌ನಲ್ಲಾಗಲೀ ಹದೀಸ್‌ನಲ್ಲಾಗಲೀ ಆಧಾರ ವಿದೆಯೇ?**

**2. ಸಲಫು ಸ್ವಾಲಿಹ್‌ಗಳು ಹೀಗೆ ಮಾಡಿದ್ದಾರೆಯೇ?**

**3. ಇಲ್ಲ ಎಂದಾದರೆ ಈ ಆಚಾರದ ಕುರಿತು ಇಸ್ಲಾಮಿನ ವಿಧಿಯೇನು?**

ಉತ್ತರ: ಶಅ್‌ಬಾನ್ 15ನೇ ರಾತ್ರಿ ಯಾವುದೇ ಪ್ರತ್ಯೇಕ ಕರ್ಮ ನಿರ್ವಹಿಸಲು ಕುರ್‌ಆನ್‌ನಲ್ಲಾಗಲೀ ಹದೀಸ್‌ನಲ್ಲಾಗಲೀ ಆದೇಶವಿಲ್ಲ. ನೀವು ಎತ್ತಿರುವ ಪ್ರಶ್ನೆಗಳಿಗೆ ಒಂದು ದುರ್ಬಲ ಹದೀಸ್‌ನ ಬೆಂಬಲವೂ ಇಲ್ಲ. ಸಲಫ್‌ಗಳಾದ ಸಹಾಬಿಗಳಿಂದಲೂ ಇದನ್ನು ಉದ್ಧರಿಸಲ್ಪಟ್ಟಿಲ್ಲ. ಇಂತಹ ಬಿದ್‌ಅತ್‌ಗಳಿಂದ ಅಲ್ಲಾಹು ಮುಸ್ಲಿಮ್ ಸಮುದಾಯವನ್ನು ಕಾಪಾಡಲಿ.

ಇಬ್ನು ಹಜರಿಲ್ ಹೈತಮಿ(ರ) ಹೇಳುತ್ತಾರೆ: "ರಜಬ್‌ನ ಮೊದಲ ಶುಕ್ರವಾರ ರಾತ್ರಿ ಹಾಗೂ ಶಅ್‌ಬಾನ್ 15ನೇ ರಾತ್ರಿಯ ಮಹತ್ವಗಳ ಕುರಿತು ವರದಿಯಾದ ಸರ್ವ ಹದೀಸ್‌ಗಳೂ ವ್ಯಾಜ್ಯವೂ ಅವಾಸ್ತವಿಕವೂ ಆಗಿದೆ.

ಇಮಾಮ್ ಗಝ್ಝಾಲಿ(ರ) ಅವರ ಇಹ್ಯಾ ಮೊದಲಾದ ಗ್ರಂಥಗಳಲ್ಲಿ ಇವುಗಳ ಮಹತ್ವ ವಿವರಿಸಿದ್ದರೂ ಅದಕ್ಕೆ ಯಾವುದೇ ಆಧಾರವಿಲ್ಲ ಎಂಬುದು ಗಮನೀಯ.

ಶಅ್‌ಬಾನ್ 15ನೇ ರಾತ್ರಿಯ ಮಹತ್ವ ಲೈಲತುಲ್ ಖದ್ರ್‌ಗೆ ಸಮಾನ ಎಂದು ಸಿಯಾದುನ್ನಮೀರಿ ಎಂಬ ವ್ಯಕ್ತಿ ಹೇಳಿದಾಗ ಇಬ್ನು ಅಬೀ ಮುಲೈಕ "ನನ್ನ ಕೈಯಲ್ಲಿ ದೊಣ್ಣೆ ಇದ್ದಿದ್ದರೆ ಖಂಡಿತ ಅವನಿಗೆ ಹೊಡೆಯುತ್ತಿದ್ದೆ" ಎಂದು ಪ್ರತಿಕ್ರಿಯಿಸಿದರು.

ಅಂದು ರಾತ್ರಿ ಮೂರು ಯಾಸೀನ್ ಓದಿ ಪ್ರಾರ್ಥಿಸುವ ಸಂಪ್ರದಾಯ ನಿರಾಧಾರವಾಗಿರುವುದು. ಶಅ್‌ಬಾನ್ 15ನೇ ರಾತ್ರಿಗೆ ಪ್ರತ್ಯೇಕ ಮಹತ್ವ ಕಲ್ಪಿಸಿ ಅಂದು ವಿವಿಧ ಆಚಾರಗಳನ್ನು ನಿರ್ವಹಿಸುವಂತೆ ಜನರಿಗೆ ಪ್ರಚೋದಿಸಿದವರು ಶಾಮ್‌ನ ತಾಬಿಉಗಳ ಸಾಲಿಗೆ ಸೇರಿದ ಖಾಲಿದ್‌ಬಿನ್ ಮಅ್‌ದಾನ್ ಮಕ್‌ಹೂಲ್ ಮುಂತಾದವರಾಗಿದ್ದಾರೆ. ಆದರೆ ಈ ಆಚಾರವನ್ನು ಹಿಜಾಝ್ ನಿವಾಸಿಗಳಾದ ಬಹುತೇಕ ವಿದ್ವಾಂಸರು ಅಂದೇ ವಿರೋಧಿಸಿದ್ದರು.

ಅಲ್ಲಾಹನಾಗಲಿ, ಅವನ ಪ್ರವಾದಿಯಾಗಲೀ ಕಲಿಸಿಕೊಡದ ಈ ಆಚಾರವನ್ನು ನಾವು ವಿರೋಧಿಸುವುದಷ್ಟೇ ಅಲ್ಲದೆ ಇತರರಿಗೂ ಈ ಬಗ್ಗೆ ಸ್ಪಷ್ಟ ತಿಳುವಳಿಕೆ ನೀಡಿ ಅವರನ್ನೂ ಸರಿದಾರಿಗೆ ಬರುವಂತೆ ಪ್ರಯತ್ನಿಸಬೇಕಾದುದು ಅಗತ್ಯ.

**-ಕೆ.ಎಂ. ಮೌಲವಿ**

## ಜಿನ್ನ್ ಪಿಶಾಚಿಗಳ ಭಯ

**ಪ್ರಶ್ನೆ: ಜಿನ್ನ್, ಶೈತಾನ್‌ಗಳನ್ನು ಮಹತ್ವೀಕರಿಸುವುದರ ಧಾರ್ಮಿಕ ವಿಧಿಯೇನು?**

ಉತ್ತರ: ಇದು ಅಪ್ಪಟ ಜಾಹಿಲಿಯಾ ಕಾಲದ ಸಂಪ್ರದಾಯ. ಅರಬ್ ಮುಶ್ರಿಕರು ಜಿನ್ನ್‌ಗಳನ್ನೂ ಪಿಶಾಚಿಗಳನ್ನೂ ಹೆದರುತ್ತಿದ್ದರಲ್ಲದೆ ಅವರನ್ನು ವಂದಿಸುತ್ತಲೂ ಅವರಿಗಾಗಿ ಬಲಿಯರ್ಪಿಸುತ್ತಲೂ ಇದ್ದರು. ಇದು ಶಿರ್ಕ್ ಎಂಬ ಮಹಾ ಪಾಪವಾಗಿದೆ.

**-ಶೈಖ್ ಅಹ್ಮದ್ ಬಿನ್ ಅಬ್ದುರ್ರಹಮಾನ್ ಸಲುವೈಯಾನ್**

# ಮಕ್ಕಳ ಬಾಧ್ಯತೆಗಳು

(9ನೇ ಪುಟದಿಂದ)

ಪಾಲಿಸಬೇಕೆಂದು ಅವರು ನಿರೀಕ್ಷಿಸುವುದಿಲ್ಲ. ಆದರೆ ಅವರ ಮಾತಿಗೆ ವಿರೋಧ ವ್ಯಕ್ತಪಡಿಸಿದರೆ ಅವರ ಮನಸ್ಸು ನೋಯುತ್ತದೆ. ಆದ್ದರಿಂದ ಮಕ್ಕಳು ಸ್ವಲ್ಪ ಬುದ್ಧಿ ಉಪಯೋಗಿಸಿದರೆ ಮಾತಾಪಿತರನ್ನು ತೃಪ್ತಿ ಪಡಿಸಲು ಸಾಧ್ಯವಾದೀತು, ಸಾಧ್ಯವಾಗ ಬೇಕು.

**ಗಮನಿಸಬೇಕಾದ ಇತರ ವಿಷಯಗಳು:** ವೃದ್ಧರಾದ ಮಾತಾಪಿತರನ್ನು ಬಿಟ್ಟು ಜಿಹಾದ್‌ಗೆ ಹೋಗಲು ಅನುಮತಿ ಕೇಳಿದ ವ್ಯಕ್ತಿಯೊಬ್ಬರನ್ನು ಸಂದೇಶ ವಾಹಕ(ಸ)ರವರು ತಡೆದಿದ್ದರೆಂಬುದನ್ನು ಹದೀಸ್‌ನಲ್ಲಿ ಕಾಣಬಹುದು. ಈ ಹದೀಸ್ ನಿಂದ ಬಹಳಷ್ಟು ಪಾಠಗಳನ್ನು ಕಲಿಯಲಿಕ್ಕಿದೆ. ವೃದ್ಧರಾದ ಮಾತಾಪಿತರನ್ನು ಬಿಟ್ಟು ಅನಿವಾರ್ಯ ಕೆಲಸಗಳಿಲ್ಲದೆ ಮಕ್ಕಳು ದೂರ ಹೋಗಬಾರದು. ಧರ್ಮಪ್ರಚಾರ ಯಾತ್ರೆಗಳು, ಸಮ್ಮೇಳನಗಳು, ನಿರ್ಬಂಧವಲ್ಲದ ಇತರ ಯಾತ್ರೆಗಳೆಲ್ಲವೂ ಅದರಲ್ಲೊಳಗೊಳ್ಳುತ್ತವೆ.

"ಒಬ್ಬನಿಗೆ ವೃದ್ಧರಾದ ಮಾತಾಪಿತರಿದ್ದೂ ಆತನಿಗೆ ಸ್ವರ್ಗಗಳಿಸಲು ಸಾಧ್ಯವಾಗದಿದ್ದರೆ ಆತ ನಶಿಸಿ ಹೋದ" ಎಂಬ ಪ್ರವಾದಿ(ಸ)ರವರ ವಚನವು ಒಬ್ಬನಿಗೆ ಪುಣ್ಯ ಗಳಿಸಲು ಮಾತಾಪಿತರ ಆರೈಕೆಯೊಂದೇ ಸಾಕೆಂಬುದನ್ನು ಕಲಿಸುತ್ತದೆ. ಮಾತಾಪಿತರು ಮುಸ್ಲಿಮೇತರರಾಗಿದ್ದರೂ ಮಕ್ಕಳು ಅವರೊಡನೆ ನಿರ್ಲಕ್ಷ್ಯತೆ ತೋರಬಾರದು. ಧಾರ್ಮಿಕ ಕಾರಣದಿಂದಾಗಿ ಅವರು ಮಕ್ಕಳೊಡನೆ ವೈರತ್ವ ಬೆಳೆಸುವುದಾದರೆ ಅದೇ ರೀತಿ ಮಕ್ಕಳೂ ವರ್ತಿಸುವುದರಲ್ಲಿ ವಿರೋಧವಿಲ್ಲ. ಆದರೆ ಸತ್ಯವಿಶ್ವಾಸ ಸ್ವೀಕರಿಸಿದ ಮಕ್ಕಳೊಡನೆ ಆ ಕಾರಣಕ್ಕಾಗಿ ವೈರತ್ವ ಕಟ್ಟಿಕೊಳ್ಳದೆ ಅವಿಶ್ವಾಸಿಗಳಾಗಿ ಬದುಕುವ ಮಾತಾಪಿತರೊಡನೆ ಸೌಜನ್ಯತೆಯಿಂದ ವರ್ತಿಸಬೇಕೆಂದು ಇಸ್ಲಾಮ್ ಕಲಿಸುತ್ತದೆ.

ಅಬೂಬಕ್ಕರ್ ಸಿದ್ದೀಕ್(ರ)ರ ಮಗಳು ಆಸ್ಮಾರ ತಾಯಿ ಬಹುದೇವ ವಿಶ್ವಾಸಿನಿಯಾಗಿದ್ದರು. ಮಗಳನ್ನು ಕಂಡು ಯಾವುದೋ ಸಹಾಯವನ್ನಪೇಕ್ಷಿಸುವುದಕ್ಕಾಗಿ ಆಕೆ ಅಸ್ಮಾ(ರ)ರ ಬಳಿ ಬಂದಿದ್ದಳು. ಅವಿಶ್ವಾಸಿನಿಯಾದ ತಾಯಿಗೆ ಸಹಾಯ ಮಾಡಬಹುದೇ ಎಂದು ಆಸ್ಮಾ(ರ) ಪ್ರವಾದಿ(ಸ)ರವರೊಡನೆ ವಿಚಾರಿಸಿದಾಗ ಮಾಡಬಹುದೆಂದು ಪ್ರವಾದಿ(ಸ)ರವರು ಉತ್ತರಿಸಿದರು. ಬಳಿಕ ಕುರ್‌ಆನ್‌ನ ಈ ಕೆಳಗಿನ ವಚನವು ಅವತೀರ್ಣಗೊಳ್ಳುತ್ತದೆ.

"ಧರ್ಮದ ವಿಷಯದಲ್ಲಿ ನಿಮ್ಮೊಡನೆ ಯುದ್ಧ ಮಾಡಿರದ ಹಾಗೂ ನಿಮ್ಮನ್ನು ನಿಮ್ಮ ಮನೆಗಳಿಂದ ಹೊರ ಹಾಕಿದವರೊಂದಿಗೆ ಸೌಜನ್ಯ ಹಾಗೂ ನ್ಯಾಯದೊಂದಿಗೆ ವರ್ತಿಸುವುದರಿಂದ ಅಲ್ಲಾಹನು ನಿಮ್ಮನ್ನು ತಡೆಯುವುದಿಲ್ಲ. ಅಲ್ಲಾಹನು ನ್ಯಾಯಪಾಲನೆ ಮಾಡುವವರನ್ನು ಪ್ರೀತಿಸುತ್ತಾನೆ. (ಕುರ್‌ಆನ್ 60:8)

ಮಾತಾಪಿತರ ಸಂರಕ್ಷಣೆಯ ವಿಷಯದಲ್ಲಿ ಇಂದು ಹೆಚ್ಚಿನ ಮಕ್ಕಳು ತೋರುವ ನಿರ್ಲಕ್ಷ್ಯವು ಧಾರ್ಮಿಕವಾಗಿ ಮಹಾ ಪಾಪವಾಗಿದೆಯೆಂದೂ ಅವರಿಗೆ ಇಹಲೋಕದಲ್ಲಿಯೂ ಪರಲೋಕ ದಲ್ಲಿಯೂ ಶಿಕ್ಷೆ ಎರಗಲಿದೆಯೆಂದೂ ಗಂಭೀರ ವಾಗಿ ಚಿಂತಿಸಬೇಕಾಗಿದೆ. ಮಕ್ಕಳು ಸಂಪಾದಿಸಲಿಕ್ಕಾಗಿ ವಿದೇಶಕ್ಕೆ ಹೋದಾಗ ಅವರ ಪತ್ನಿಯರ ಕಾರುಬಾರುಗಳಡಿಯಲ್ಲಿ ಜಜ್ಜಲ್ಪಟ್ಟು ದುಃಖದೆಡೆಗೂ ದುರಂತದೆಡೆಗೂ ಏಕಾಂತದೆಡೆಗೂ ತಳ್ಳಲ್ಪಡುವ ಅದೆಷ್ಟೋ ಮಾತಾಪಿತರನ್ನು ಕಾಣಬಹುದಾಗಿದೆ. ವೃದ್ಧ ಮಾತಾಪಿತರೊಡನೆ ಮಕ್ಕಳಾಗಲೀ ಇತರ ಬಂಧುಗಳಾಗಲೀ ಮಾತ ನಾಡುವ ಸೌಜನ್ಯವನ್ನು ಸಹಾ ತೋರದೆ ಅವರನ್ನು ಕಡೆಗಣಿಸುವ ಕರುಣಾಜನಕ ಸನ್ನಿವೇಶ ಗಳನ್ನು ಸಮುದಾಯದ ಬಹಳಷ್ಟು ಕುಟುಂಬ ಗಳಲ್ಲಿ ಕಾಣುತ್ತೇವೆ. ವೃದ್ಧ ಮಾತಾಪಿತರು ಹಾದು ಹೋಗುವ ದಾರಿಯಲ್ಲೇ ನಮಗೂ ಹಾದು ಹೋಗಲಿಕ್ಕಿದೆಯೆಂಬ ನೆನಪು ಆ ಮಕ್ಕಳ ಕಣ್ಣು ತೆರೆಸಲಿ.

ಕುಟುಂಬ ಸಂಬಂಧಗಳ ಸುಪ್ರಧಾನ ವಿಷಯವಾಗಿದೆ ಮಕ್ಕಳ ಪೋಷಣೆ ಹಾಗೂ ಸಂರಕ್ಷಣೆ. ಮಾತಾಪಿತರನ್ನು ಮಕ್ಕಳು ಸಂರಕ್ಷಿಸ ಬೇಕಾದ ವಿಷಯವನ್ನು ಎತ್ತಿ ಹೇಳಿದ "ಸೂರ ತುಲ್ ಇಸ್ರಾಅ್‌ನ ಸೂಕ್ತದಲ್ಲೇ ಮಕ್ಕಳ ವಿಷಯದಲ್ಲಿ ಮಾತಾಪಿತರು ಅನುಸರಿಸಬೇಕಾದ ನೀತಿಯ ಕುರಿತೂ ಸೂಚಿಸಲಾಗಿದೆ. ತಾಯಿ ಪಕ್ಷಿಯು ತನ್ನ ಮರಿಗಳನ್ನು ಸಂರಕ್ಷಿಸುವ ಹಾಗೆಯೇ ವೃದ್ಧ ಮಾತಾಪಿತರನ್ನು ಮಕ್ಕಳು ಸಂರಕ್ಷಿಸಬೇ ಕೆಂದೂ ಅವರಿಗಾಗಿ ಪ್ರಾರ್ಥಿಸಬೇಕೆಂದೂ ಕುರ್‌ಆನ್ ಬೋಧಿಸುತ್ತದೆ. ಮಾತಾಪಿತರಿಗಾಗಿ ಮಕ್ಕಳು ಪ್ರಾರ್ಥಿಸಬೇಕಾದ ರೀತಿಯನ್ನು ಕುರ್‌ಆನಿನಲ್ಲಿ ಕಲಿಸಲಾಗಿದೆ. "ಓ ನನ್ನ ಪ್ರಭೂ, ಇವರು ನನ್ನ ಚಿಕ್ಕಂದಿನಲ್ಲಿ ಪ್ರೀತಿ ವಾತ್ಸಲ್ಯ ಗಳಿಂದ ನನ್ನನ್ನು ಸಾಕಿದಂತೆಯೇ ನೀನು ಅವರ ಮೇಲೆ ಕೃಪೆ ತೋರು." (ಬನೀ ಇಸ್ರಾಈಲ್ 24)

# ಅಧ್ಯಾಯ - 3 ಆಲ್ ಇಮ್ರಾನ್

ಒಟ್ಟು ಸೂಕ್ತಗಳು: 200 | ಮುಹಮ್ಮದ್ ಅಮಾನಿ ಮೌಲವಿ | ಪ್ರಕಟಿತ ಸೂಕ್ತಗಳು: 37, 38, 39, 40

37 فَتَقَبَّلَهَا رَبُّهَا بِقَبُولٍ حَسَنٍ وَأَنْبَتَهَا نَبَاتًا حَسَنًا وَكَفَّلَهَا زَكَرِيَّا كُلَّمَا دَخَلَ عَلَيْهَا زَكَرِيَّا الْمِحْرَابَ وَجَدَ عِنْدَهَا رِزْقًا قَالَ يَا مَرْيَمُ أَنَّىٰ لَكِ هَٰذَا قَالَتْ هُوَ مِنْ عِنْدِ اللَّهِ إِنَّ اللَّهَ يَرْزُقُ مَنْ يَشَاءُ بِغَيْرِ حِسَابٍ ﴿٣٧﴾

38 هُنَالِكَ دَعَا زَكَرِيَّا رَبَّهُ قَالَ رَبِّ هَبْ لِي مِنْ لَدُنْكَ ذُرِّيَّةً طَيِّبَةً إِنَّكَ سَمِيعُ الدُّعَاءِ ﴿٣٨﴾

39 أَنَّ اللَّهَ يُبَشِّرُكَ بِيَحْيَىٰ مُصَدِّقًا بِكَلِمَةٍ مِنَ اللَّهِ وَسَيِّدًا وَحَصُورًا وَنَبِيًّا مِنَ الصَّالِحِينَ ﴿٣٩﴾

40 قَالَ رَبِّ أَنَّىٰ يَكُونُ لِي غُلَامٌ وَقَدْ بَلَغَنِيَ الْكِبَرُ وَامْرَأَتِي عَاقِرٌ قَالَ كَذَٰلِكَ اللَّهُ يَفْعَلُ مَا يَشَاءُ ﴿٤٠﴾

| | | | | | | |
|---|---|---|---|---|---|---|
| **37** | | | | | | |
| ಒಳ್ಳೆಯ ಉತ್ಪಾದನೆಯಾಗಿ نَبَاتًا حَسَنًا | ಮತ್ತು ಅವಳನ್ನು ಬೆಳೆಸಿದನು وَأَنْبَتَهَا | ಉತ್ತಮವಾದ حَسَنٍ | ಒಂದು ಸ್ವೀಕಾರ بِقَبُولٍ | ಅವಳ ಪ್ರಭು رَبُّهَا | ಹಾಗೆ ಅವಳನ್ನು ಸ್ವೀಕರಿಸಿಕೊಂಡನು فَتَقَبَّلَهَا | |
| ಪ್ರಾರ್ಥನಾ ವೇದಿಕೆಯಲ್ಲಿ الْمِحْرَابَ | ಝುಕರಿಯ್ಯಾ زَكَرِيَّا | ಅವಳ ಬಳಿ عَلَيْهَا | ಪ್ರವೇಶಿಸುವಾಗಲೆಲ್ಲಾ كُلَّمَا دَخَلَ | ಝುಕರಿಯ್ಯಾರಿಗೆ زَكَرِيَّا | ಮತ್ತು ಅವಳನ್ನು ವಹಿಸಿಕೊಟ್ಟನು وَكَفَّلَهَا | |
| ಅವಳು ಹೇಳಿದಳು قَالَتْ | ಇದು هَٰذَا | ಎಲ್ಲಿಂದ ನಿನಗೆ أَنَّىٰ لَكِ | ಅವರು ಹೇಳಿದರು. ಓ ಮರ್ಯಮ್ قَالَ يَا مَرْيَمُ | ಆಹಾರವನ್ನು رِزْقًا | ಅವಳ ಬಳಿ عِنْدَهَا | ಅವರು ಕಂಡರು وَجَدَ |
| | ಯಾವ ಲೆಕ್ಕವೂ ಇಲ್ಲದೆ بِغَيْرِ حِسَابٍ | ಅವನಿಚ್ಛಿಸುವವರಿಗೆ مَنْ يَشَاءُ | ಅವನು (ಆಹಾರ) ನೀಡುತ್ತಾನೆ يَرْزُقُ | ನಿಶ್ಚಯವಾಗಿಯೂ ಅಲ್ಲಾಹು إِنَّ اللَّهَ | ಅಲ್ಲಾಹನ ವತಿಯಿಂದಾಗಿದೆ مِنْ عِنْدِ اللَّهِ | ಅದು هُوَ |
| **38** | | | | | | |
| ನಿನ್ನ ಬಳಿಯಿಂದ مِنْ لَدُنْكَ | ನನಗೆ ಪ್ರಧಾನ ಮಾಡು هَبْ لِي | ಅವರು ಹೇಳಿದರು - ಪ್ರಭೂ, قَالَ رَبِّ | ತನ್ನ ಪ್ರಭುವಿನೊಡನೆ رَبَّهُ | ಝುಕರಿಯ್ಯಾ ಪ್ರಾರ್ಥಿಸಿದರು دَعَا زَكَرِيَّا | ಅಲ್ಲಿ(ಆ ಸಂದರ್ಭದಲ್ಲಿ) هُنَالِكَ | |
| | ಪ್ರಾರ್ಥನೆಯನ್ನು الدُّعَاءِ | ಆಲಿಸುವವನಾಗಿರುವೆ سَمِيعُ | ನಿಶ್ಚಯವಾಗಿಯೂ ನೀನು إِنَّكَ | ಪರಿಶುದ್ಧವಾದ طَيِّبَةً | ಸಂತತಿಯನ್ನು ذُرِّيَّةً | |
| **39** | | | | | | |
| ನಿಶ್ಚಯವಾಗಿಯೂ ಅಲ್ಲಾಹು أَنَّ اللَّهَ | ಮಿಹ್ರಾಬ್‌ನಲ್ಲಿ فِي الْمِحْرَابِ | ನಮಾಝ್ ನಿರ್ವಹಿಸುತ್ತ يُصَلِّي | ಅವರು ನಿಂತಿರುವಾಗ وَهُوَ قَائِمٌ | ಮಲಕ್‌ಗಳು الْمَلَائِكَةُ | ಹಾಗೆ(ಆಗ) ಅವರನ್ನು ಕರೆದರು فَنَادَتْهُ | |
| ಅಲ್ಲಾಹನ ಕಡೆಯ مِنَ اللَّهِ | ಒಂದು ವಚನವನ್ನು بِكَلِمَةٍ | ಸಮರ್ಥಿಸುವವನಾಗಿ مُصَدِّقًا | ಯಹ್ಯಾನ ಕುರಿತು بِيَحْيَىٰ | ನಿಮಗೆ ಶುಭ ಸುದ್ದಿಯನ್ನು ತಿಳಿಸುತ್ತಾನೆ يُبَشِّرُكَ | | |
| | ಸಜ್ಜನರಲ್ಲೊಳಗೊಂಡ مِنَ الصَّالِحِينَ | ಮತ್ತು ಪ್ರವಾದಿಯಾಗಿ وَنَبِيًّا | ಮತ್ತು ಆತ್ಮ ನಿಯಂತ್ರಕನಾಗಿ وَحَصُورًا | ಮತ್ತು ನೇತಾರನಾಗಿ وَسَيِّدًا | | |
| **40** | | | | | | |
| ವೃದ್ಧಾಪ್ಯವು الْكِبَرُ | ನನಗೆ ಬಂದು ಬಿಟ್ಟಿದೆ وَقَدْ بَلَغَنِيَ | ಗಂಡು ಮಗು غُلَامٌ | ನನಗೆ لِي | ಉಂಟಾಗುವುದಾದರೂ ಹೇಗೆ أَنَّىٰ يَكُونُ | ನನ್ನ ಪ್ರಭೂ, رَبِّ | ಅವರು ಹೇಳಿದರು قَالَ |
| ಅವನಿಚ್ಛಿಸಿದ್ದನ್ನು مَا يَشَاءُ | ಅಲ್ಲಾಹು ಮಾಡುತ್ತಾನೆ اللَّهُ يَفْعَلُ | ಹಾಗೆಯೇ كَذَٰلِكَ | ಅವನು ಹೇಳಿದನು قَالَ | ಬಂಜೆಯಾಗಿದ್ದಾಳೆ عَاقِرٌ | ಮತ್ತು ನನ್ನ ಪತ್ನಿಯಾದರೋ وَامْرَأَتِي | |

37. ಹಾಗೆ ಅವಳ ಪ್ರಭುವು ಅವಳನ್ನು ಉತ್ತಮ ರೀತಿಯಲ್ಲಿ ಸ್ವೀಕರಿಸಿಕೊಂಡನು ಮತ್ತು ಒಳ್ಳೆಯ ರೀತಿಯಲ್ಲಿ ಅವಳನ್ನು ಬೆಳೆಸಿದನು. ಅವಳನ್ನು (ಸಂರಕ್ಷಿಸುವ ಹೊಣೆಯನ್ನು) ಅವನು ಝುಕರಿಯ್ಯಾರಿಗೆ ವಹಿಸಿಕೊಟ್ಟನು. ಝುಕರಿಯ್ಯಾರವರು ಅವಳಿದ್ದ ಮಿಹ್ರಾಬ್(ಪ್ರಾರ್ಥನಾ ವೇದಿಕೆ)ಗೆ ಪ್ರವೇಶಿಸುವಾಗಲೆಲ್ಲಾ ಅವರು ಅವಳ ಬಳಿ (ಕೆಲವು) ಆಹಾರ ವಸ್ತುಗಳನ್ನು ಕಾಣುತ್ತಿದ್ದರು. "ಓ ಮರ್ಯಮ್, ಇದು ಎಲ್ಲಿಂದ ನಿನಗೆ?" ಎಂದು ಅವರು ಕೇಳಿದರು. (ಅದಕ್ಕೆ) ಅವಳು "ಇದು ಅಲ್ಲಾಹನ ವತಿಯಿಂದ (ಬಂದಿದೆ). ನಿಶ್ಚಯವಾಗಿಯೂ ಅಲ್ಲಾಹು ತಾನಿಚ್ಛಿಸಿದವರಿಗೆ ಲೆಕ್ಕವಿಲ್ಲದಷ್ಟು ಕೊಡುತ್ತಾನೆ" ಎಂದಳು.

38. ಅಲ್ಲಿ ಝುಕರಿಯ್ಯಾರವರು ತನ್ನ ಪ್ರಭುವಿನೊಡನೆ (ಹೀಗೆ) ಪ್ರಾರ್ಥಿಸಿದರು: "ಪ್ರಭೂ, ನಿನ್ನ ವತಿಯಿಂದ ನನಗೊಂದು ಉತ್ತಮ ಸಂತತಿಯನ್ನು ಪ್ರದಾನ ಮಾಡು. ನಿಶ್ಚಯವಾಗಿಯೂ ನೀನು ಪ್ರಾರ್ಥನೆಯನ್ನು ಆಲಿಸು(ಸ್ವೀಕರಿಸು)ವವನಾಗಿರುವೆ."

39. ಹಾಗೆ ಅವರು ಮಿಹ್ರಾಬ್‌ನಲ್ಲಿ ನಮಾಝ್ ಮಾಡುತ್ತ ನಿಂತಿದ್ದಾಗ ಮಲಕ್‌ಗಳು ಅವರನ್ನು ಕರೆದು ನಿಶ್ಚಯವಾಗಿಯೂ "ಅಲ್ಲಾಹು ತಮಗೆ ಯಹ್ಯಾ (ಎಂಬ ಮಗುವಿ)ನ ಕುರಿತಾದ ಶುಭ ಸುದ್ದಿಯನ್ನು ತಿಳಿಸುತ್ತಾನೆ. (ಅವನು) ಅಲ್ಲಾಹನ ಕಡೆಯ ಒಂದು ವಚನವನ್ನು ಸಮರ್ಥಿಸುವವನೂ ನೇತಾರನೂ ಆತ್ಮ ನಿಯಂತ್ರಕನೂ ಸಜ್ಜನರಲ್ಲೊಳಗೊಂಡ ಪ್ರವಾದಿಯೂ ಆಗಿರುವನು" ಎಂದರು.

40. ಅವರು ಹೇಳಿದರು: "ನನಗೆ ಗಂಡು ಮಗುವುಂಟಾಗುವುದಾದರೂ ಹೇಗೆ? ನನಗೆ ವೃದ್ಧಾಪ್ಯವು ಬಂದುಬಿಟ್ಟಿದೆ ಮತ್ತು ನನ್ನ ಪತ್ನಿಯೂ ಬಂಜೆಯಾಗಿದ್ದಾಳೆ." (ಆಗ) ಅವನು (ಅಲ್ಲಾಹು) ಹೇಳಿದನು: "ಹಾಗೆಯೇ. ಅಲ್ಲಾಹು ತಾನಿಚ್ಛಿಸುವುದನ್ನು ಮಾಡುತ್ತಾನೆ."

Name & Address:

**PAVITHRA SANDESHA**
*Kannada Fortnightly*
Polymer House, 2nd Floor, Nellikai Road, Mangalore - 575 001

Regd. With RNI No.: 63987/96
Postal Regd. No. KA/SK/MNG/160/2012-2014
Licence to Post without prepayment.
WPP/SK/MNG-104/2012-2014
Posted at Head Post Office, Mangalore.
Posting Date: 13th & 28th of Every Month
**Publication Date: 10th & 25th of Every Month**



# ವಾಟ್ಸಪ್ ಸಂದೇಶ ಕಾಲಂ

وَهُوَ الَّذِي يَتَوَفَّاكُم بِاللَّيْلِ وَيَعْلَمُ مَا جَرَحْتُم بِالنَّهَارِ ثُمَّ يَبْعَثُكُمْ فِيهِ لِيُقْضَىٰ أَجَلٌ مُّسَمًّى ثُمَّ إِلَيْهِ مَرْجِعُكُمْ ثُمَّ يُنَبِّئُكُم بِمَا كُنتُمْ تَعْمَلُونَ



ಮತ್ತು ರಾತ್ರಿ ವೇಳೆ (ನಿದ್ರೆಯಲ್ಲಿ) ನಿಮ್ಮನ್ನು ವಶಪಡಿಸಿ ಕೊಳ್ಳುವವನು ಅವನೇ ಮತ್ತು ಹಗಲಲ್ಲಿ ನೀವು ಮಾಡುತ್ತಿರುವುದನ್ನು ಅವನು ಬಲ್ಲನು. ಅನಂತರ (ನಿದ್ದೆಯ ನಂತರ) ನಿಶ್ಚಯಿಸಲ್ಪಟ್ಟ ಒಂದು ಅವಧಿ (ಪೂರ್ಣವಾಗಿ) ನಿರ್ವಹಿಸಲ್ಪಡಲಿಕ್ಕಾಗಿ ಅದರಲ್ಲಿ (ಹಗಲಲ್ಲಿ) ಅವನು ನಿಮ್ಮನ್ನು ಎಬ್ಬಿಸುತ್ತಾನೆ. ಆ ಮೇಲೆ ನಿಮ್ಮ ಮರಳುವಿಕೆಯೂ ಅವನ ಕಡೆಗೇ ಆಗಿದೆ. ಅನಂತರ ನೀವು ಮಾಡಿ ಕೊಂಡಿದ್ದುದರ ಬಗ್ಗೆ ಅವನು ನಿಮಗೆ ತಿಳಿಸುವನು. (6x60)

(ಪ್ರವಾದಿಯವರೇ), ನನ್ನ ದಾಸರು ನನ್ನ ಬಗ್ಗೆ ನಿಮ್ಮೊಡನೆ ಕೇಳಿದರೆ ಖಂಡಿತವಾಗಿಯೂ ನಾನು (ಅವರಿಗೆ) ನಿಕಟವಾಗಿದ್ದೇನೆ. (ಎಂದು ಹೇಳಿರಿ). ನನ್ನನ್ನು ಕರೆ(ದು ಪ್ರಾರ್ಥಿಸಿ)ದರೆ ಕರೆಯು(ಕರೆದು ಪ್ರಾರ್ಥಿಸು)ವವನ ಕರೆಗೆ ನಾನು ಉತ್ತರಿಸುತ್ತೇನೆ.- ಆದುದರಿಂದ ಅವರು ನನಗೆ (ನನ್ನ ಕರೆಗೆ) ಉತ್ತರಿಸಲಿ ಮತ್ತು ನನ್ನಲ್ಲಿ ಅವರು ವಿಶ್ವಾಸವಿಡಲಿ. (ಹಾಗಾದಲ್ಲಿ) ಅವರು ನೇರ ಹಾದಿ ಪಡೆಯಬಹುದು. (2x186)






"ಕಾರ್ಮಿಕನ ಬೆವರು ಆರುವುದಕ್ಕೆ ಮುಂಚೆ ಅವನ ವೇತನವನ್ನು ಅವನಿಗೆ ಕೊಟ್ಟು ಬಿಡಿ"
**[ಪ್ರವಾದಿ ಮಹಮ್ಮದ್ (ಸ)]**



وَمَآ أَرْسَلْنَٰكَ إِلَّا رَحْمَةً لِّلْعَٰلَمِينَ ١٠٧

(ಪ್ರವಾದಿಯವರೇ) ನಾವು ನಿಮ್ಮನ್ನು ಜಗತ್ತಿನಲ್ಲಿರುವವರಿಗೆಲ್ಲಾ ಅನುಗ್ರಹವಾಗಿ ವಿನಾ ಕಳುಹಿಸಿರುವುದಿಲ್ಲ. (21x107)













## ತಾಯಿಯ ಮಮತೆ

ತಾಯಿಯು ತಾನು ಬೆಂಕಿಯಲ್ಲಿ ಬೆಂದರೂ ನೀರಲ್ಲಿ ಮುಳುಗಿದರೂ ತನ್ನ ಅಂತಿಮ ಶ್ವಾಸದ ವರೆಗೂ ಮಗುವನ್ನು ರಕ್ಷಿಸಲು ಪ್ರಯತ್ನಿಸುತ್ತಾಳೆ.
ಆದರೆ! ಮಕ್ಕಳು ಅವಳನ್ನು ವಾರ್ಧಕ್ಯದಲ್ಲಿ ವೃದ್ಧಾಶ್ರಮಕ್ಕೆ ಸೇರಿಸುತ್ತಾರೆ.

ನಾವು ಮಾನವನೊಡನೆ ಅವನ ಮಾತಾಪಿತರ ಬಗ್ಗೆ (ತಿಳಿದು ಕೊಳ್ಳುವಂತೆ) ನಿರ್ದೇಶಿಸಿರುತ್ತೇವೆ. ಅವನ ತಾಯಿಯು ದಣಿವಿನ ಮೇಲೆ ದಣಿವಿನೊಂದಿಗೆ ಅವನನ್ನು (ಗರ್ಭ) ಹೊತ್ತಳು. ಮತ್ತು ಅವನ ಸ್ತನಪಾನ ಬಿಡಿಸುವುದು ಎರಡು ವರ್ಷಗಳಲ್ಲಾಗಿದೆ. (ಆದುದರಿಂದಲೇ ನಾವು ಅವನೊಡನೆ ಹೀಗೆ ಉಪದೇಶಿಸಿದೆವು) "ನೀನು ನನಗೂ ನಿನ್ನ ಮಾತಾ ಪಿತರಿಗೂ ಕೃತಜ್ಞತೆ ಸಲ್ಲಿಸು (ಮತ್ತು) ನಿಮ್ಮ ಮರಳುವಿಕೆಯು ನನ್ನ ಬಳಿಗೇ ಆಗಿದೆ." (31x14)

Printed, Published & Owned by RIYAZ AHMED on behalf of SATHYA PRAKASHANA PUBLICATION TRUST MANGALORE, Printed at Digantha Mudrana Ltd., Yeyyadi, Mangalore, D.K. Published at 20-2-155/1, 2nd Floor, Polymer House Bldg., Nellikai Road, Mangalore - 575 001, D.K.. D.T.P.: Sowmya Graphics, Mangalore. Editor: M.G. Muhammad